# ರಾಜಾಜಿಯವರ ಕಥೆಗಳು


ಅನುವಾದಕರು :

**ಕೆ. ಸಂಪದ್ಗಿರಿರಾವ್,** ಎಂ.ಎ.



**ಸತ್ಯಶೋಧನ ಪ್ರಕಟನ ಮಂದಿರ**

**ಕೋಟೆ - ಬೆಂಗಳೂರು ನಗರ**

೧೯೪೭

# ವಿಷಯಾನುಕ್ರಮಣಿಕೆ

# ಅನುವಾದಕರ ಮಾತು

ಸುಮಾರು ೨೦ ವರ್ಷಗಳ ಹಿಂದೆ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ರಾಜಾಜಿಯವರ 'ಮುಕುಂದ' ಎಂಬ ಕಥೆ ಪ್ರಕಟವಾಯಿತು. ಈ ಕಥೆಯನ್ನು ಕಾರವಾರದ ಮಾನ್ಯರೊಬ್ಬರು ಓದಿ, ಕನ್ನಡಕ್ಕೆ ಅನುವಾದಿಸಬೇಕೆಂಬ ಆಕಾಂಕ್ಷೆಯಿಂದ ರಾಜಾಜಿಯವರ ಅನುಮತಿಯನ್ನು ಬೇಡಿದರು. ಆ ಕಥೆ ತಮಿಳಿನಲ್ಲಿ ಬರೆದುದರ ಸಂಗ್ರಹವಾಗಿದ್ದುದರಿಂದ, ಅನುವಾದ ಮಾಡುವುದಕ್ಕೆ ಇಂಗ್ಲಿಷಿನ ಕಥೆಗಿಂತಲೂ ತಮಿಳಿನ ಮೂಲವೇ ಮೇಲು ಎಂದು ವಾದಿಸಿ, ರಾಜಾಜಿಯವರು ನನಗೆ ಈ ಕೆಲಸವನ್ನು ಮಾಡುವಂತೆ ಒಪ್ಪಿಸಿದರು. ಅವರ ಆಜ್ಞೆಯಂತೆ ಈ ಕಥೆಯನ್ನೂ ಅವರು ಬರೆದ ಇತರ ಕಥೆಗಳನ್ನೂ ನಾನು ಕನ್ನಡಕ್ಕೆ ಅನುವಾದ ಮಾಡಿದೆನು. ರಾಜಾಜಿಯವರ ತಮಿಳು ಶೈಲಿ ಬಲು ಸರಳವಾದುದೂ, ಮನೆಯ ಮಾತುಗಳನ್ನೇ ಹೆಚ್ಚಾಗಿ ಒಳಗೊಂಡುದೂ ಆಗಿರುತ್ತದೆ. ಈ ಕಾರಣದಿಂದ ನಾನು ಅವರ ಕಥೆಗಳನ್ನು ಕನ್ನಡಕ್ಕೆ ತರಲು ಸಂತೋಷದಿಂದ ಉದ್ಯುಕ್ತನಾದೆನು.

ರಾಜಾಜಿಯವರ ಕಥೆಗಳ ಸಂಗ್ರಹವು ಮದ್ರಾಸಿನ ಅಲೈಯನ್ಸ್ ಕಂಪನಿಯವರಿಂದ ಪ್ರಕಟವಾಗಿರುತ್ತದೆ. ಈ ಸಂಗ್ರಹದಲ್ಲಿ ಬರುವ 'ವೇಣುಗಾನ' ಎಂಬ ಕಥೆ ರಾಜಾಜಿಯವರ ಸ್ವಂತದ್ದಲ್ಲ. ಶ್ರೀಮಾನ್ ಮಾಸ್ತಿಯವರ 'ಮಸುಮತ್ತಿ' ಎಂಬ ಕಥೆಯ ತಮಿಳಿನ ಅನುವಾದ ಅದು. ಆದ್ದರಿಂದ ಅದನ್ನು ಬಿಟ್ಟು ಉಳಿದುದನ್ನು ಕನ್ನಡಕ್ಕೆ ಪರಿವರ್ತಿಸಬಹುದೆಂದು ರಾಜಾಜಿಯವರು ನನಗೆ ಪ್ರೇರಿಸಿದರು. 'ರಾಯಪ್ಪನ್' ಎಂಬ ಕಥೆ 'ಆನಂದ ವಿಕಟನ್' ಪತ್ರಿಕೆಯಲ್ಲಿ ಪ್ರಕಟವಾದುದು. ಅದನ್ನೂ ಕನ್ನಡಕ್ಕೆ ಪರಿವರ್ತಿಸಿದ್ದೇನೆ. ಹೀಗೆ ಈ ಕಥೆಯನ್ನು ಅನುವಾದ ಮಾಡಲು ಅನುಮತಿಯಿತ್ತ 'ಆನಂದ ವಿಕಟನ್' ಪತ್ರಿಕೆಯ ಸಂಪಾದಕರಿಗೂ, ನನ್ನ

ಅನುವಾದಗಳಲ್ಲಿ ಕೆಲಕೆಲವನ್ನು ಪ್ರಕಟಿಸಿ ಪ್ರೋತ್ಸಾಹಿಸಿದ 'ಜಯಕರ್ಣಾಟಕ,' 'ದೇಶೀಯ ವಿದ್ಯಾಶಾಲಾ ಪತ್ರಿಕೆ'ಗಳ ಸಂಪಾದಕರಿಗೂ ನನ್ನ ವಂದನೆಗಳು.

ಈ ಅನುವಾದಕ್ಕೆ ಅನುಮತಿಯನ್ನೂ ಪ್ರೋತ್ಸಾಹವನ್ನೂ ಕೊಟ್ಟ ರಾಜಾಜಿಯವರಿಗೂ, ಅಲೈಯನ್ಸ್ ಕಂಪೆನಿಯವರಿಗೂ ನಾನು ಬಹಳ ಕೃತಜ್ಞನಾಗಿರುತ್ತೇನೆ.

ಬೆಂಗಳೂರು

ಕೆ. ಸಂಪದ್ಗಿರಿರಾವ್

೨೮-೧-೪೪

# ರಾಜಾಜಿಯವರ ಕಥೆಗಳು

## ೧. ದೇವಾನೆ

### ೧

ರಾಮನಾಥಯ್ಯರ್ರವರೂ ಅವರ ಹೆಂಡತಿ ಸೀತಾಲಕ್ಷ್ಮಿಯೂ ತಮ್ಮ ಮೋಟಾರ್‌ಗಾಡಿಯಲ್ಲಿ ಚೀನಾ ಬಜಾರಿಗೆ ಹೋಗಿ ಕೆಲವು ಸಾಮಾನುಗಳನ್ನು ಕೊಂಡುಕೊಂಡು ಪಕ್ಕದಲ್ಲಿರುವ ಫಲಾಹಾರ ಮಂದಿರದಲ್ಲಿ ಪ್ರವೇಶಿಸಿ ಉಪಾಹಾರವನ್ನು ಮುಗಿಸಿಕೊಂಡು ಮತ್ತೆ ಬಂದು ಗಾಡಿಯಲ್ಲಿ ಕುಳಿತು ಕೊಂಡರು.

'ಸಮುದ್ರದ ತೀರಕ್ಕೆ ಹೋಗೋಣವೆ ?' ಎಂದರು ರಾಮನಾಥಯ್ಯ ರ್ರವರು.

"ಬೀಚಿಗೇ ? ಜನಸಂದಣಿಯಿಲ್ಲದ ಸ್ಥಳಕ್ಕೆ ಹೋಗಿ ಗಾಡಿಯನ್ನು ನಿಲ್ಲಿಸುವಂತೆ ಹೇಳಿರಿ. ಗುಂಪನ್ನು ಕಂಡರೆ ನನಗಾಗುವುದೇ ಇಲ್ಲ. ಅಗೋ, ಟಾಯ್ಸ್ ಮಾರುತ್ತಾನೆ. ಯಾವುದಾದರು ಎರಡನ್ನು ಕೊಳ್ಳಿರಿ. ಮಗುವಿಗೆ ತೆಗೆದುಕೊಂಡು ಹೋಗೋಣ."

ಸೀತಾಲಕ್ಷ್ಮಿ ಇದನ್ನು ಮುಗಿಸುವದರೊಳಗಾಗಿ ಅವಳ ಯೋಚನೆ ಯನ್ನು ಆ ಬೊಂಬೆ ಮಾರುವವನು ಹೇಗೋ ಗ್ರಹಿಸಿಕೊಂಡು ಗಾಡಿಯ ಬಳಿ ಬಂದನು. ಗಾಡಿಯಲ್ಲಿದ್ದ ಹಾಗೆಯೇ ಬೆಲೆಯನ್ನು ಕೇಳಿ ಸಾಮಾನು ಗಳನ್ನು ಆರಿಸಿ ನೋಡುತ್ತಿದ್ದರು. ಆಗ ಮತ್ತೊಂದು ಬಾಗಿಲ ಬಳಿ ಹುಡುಗಿಯೊಬ್ಬಳು, ಭಿಕ್ಷುಕಳು, ಒಂದು ಸಣ್ಣ ಕೂಸನ್ನು ಕೈಯಲ್ಲಿ ಎತ್ತಿ ತೋರಿಸುತ್ತ, "ಅಯ್ಯಾ, ಧರ್ಮ ಕೊಡಿರಿ. ಈ ಕೂಸನ್ನು ನೋಡಿರಿ— ಅಮ್ಮಾ" ಎಂದಳು.

"ಎಲ್ಲಾ ಜಪರ್ಾ ಟಾಯ್ಸ್ ಅಲ್ಲವೇ?" ಎಂದು ರಾಮನಾಥಯ್ಯರವರು ಕೇಳಿದರು.

"ಜಪಾನೇ! ಬೇರೆ ಯಾವುದು? ನಮ್ಮೂರಿನಲ್ಲಿ ಇದೆಲ್ಲ ಮಾಡುತ್ತಾರೆಯೇ?" ಎಂದನು ವ್ಯಾಪಾರಿ.

ಭಿಕ್ಷುಕಳು ಮತ್ತೆ ಬೇಡಿದಳು.

"ವ್ಯಾಪಾರ ಮಾಡುತ್ತಿರಬೇಕಾದರೆ ಇದೇನು ಶನಿ! ಈ ಪಟ್ಟಣದಲ್ಲಿ ತಿರುಕರ ಹಾವಳಿ ಬಹಳವಾಗಿಬಿಟ್ಟಿದೆ" ಎಂದಳು ಸೀತಾಲಕ್ಷ್ಮಿ.

ತಿರುಕಳು: "ಹಸಿವೆಯಾಗಿದೆಯಮ್ಮಾ, ಕಣ್ಣೆತ್ತಿ ನೋಡಮ್ಮಾ, ನೀನು ಮಾರಾಯಿತಿಯಾಗಿರಬೇಕು!' ಎಂದಳು.

ಸೀತಾಲಕ್ಷ್ಮಿ: "ಹೋಗುತ್ತೀಯಾ, ಪೋಲೀಸಿನವರನ್ನು ಕರೆದು ಹೇಳಲೋ?" ಎಂದು ಗದರಿಸಿದಳು.

"ಹಾಲಿಲ್ಲದೆ ಒದ್ದಾಡುತ್ತಿದೆಯಮ್ಮಾ! ಒಂದಾಣೆ ಭಿಕ್ಷೆಯನ್ನು ಕೊಡಿರಮ್ಮಾ! ಎಷ್ಟೋ ಖರ್ಚು ಮಾಡುತ್ತೀರಿ.—"

ರಾಮನಾಥಯ್ಯರವರು ಬೆಲೆಯನ್ನು ಮಾತಾಡಿ, ತೆಗೆದುಕೊಂಡ ಸಾಮಾನುಗಳನ್ನು ಗಾಡಿಯಲ್ಲಿ ಇಟ್ಟುಕೊಂಡು "ಓಡಿಸು ಗಾಡಿಯನ್ನು. ಬೀಚಿಗೆ ಬಿಡು" ಎಂದರು.

ಗಾಡಿಯನ್ನೋಡಿಸುವವನು ಭಿಕ್ಷುಕಳನ್ನು ಆಚೆಗೆ ಸರಿಯುವಂತೆ ಹೇಳಿ ಗಾಡಿಯನ್ನು ನಡೆಸಿದನು.

"ಅಯ್ಯಾ! ಅಯ್ಯಾ!" ಎನ್ನುತ್ತ ಭಿಕ್ಷುಕಳು ಸ್ವಲ್ಪ ದೂರ ಗಾಡಿಯನ್ನು ಹಿಡಿದುಕೊಂಡು ಓಡಿದಳು.

"ಓಡಬೇಡ! ಸತ್ತುಹೋಗುತ್ತೀಯೆ" ಎಂದರು ರಾಮನಾಥಯ್ಯರವರು. ಆಗ ಭಿಕ್ಷುಕಳ ಮುಖವನ್ನು ನೋಡಿದರು. ಎಲ್ಲಿಯೋ ಹಿಂದೆ ನೋಡಿದ್ದಂತೆ ತೋರಿತು.

ಗಾಡಿ ವೇಗವಾಗಿ ಹೊರಟ ಕೂಡಲೇ "ಅಯ್ಯೋ ಪಾಪ! ಚಿಕ್ಕ ಹುಡುಗಿ. ಮುಖವನ್ನು ನೋಡಿದರೆ ನಮ್ಮ ಊರಿನವಳಂತೆ ತೋರುವುದು" ಎಂದರು.

ಸೀತಾಲಕ್ಷ್ಮಿ: "ಯಾವ ಊರ ಶನಿಯೋ, ಅವಳನ್ನು ಕುರಿತು ನಮಗೇನು ಚಿಂತೆ? ಇಲ್ಲಿ ಕೊಡಿ—ಅದೇನದು, ಹೊಸದಾಗಿದೆ, ಏರೋ ಪ್ಲೇನೇ? ಕೀಲಿನದೇ ಅಥವಾ ಬರಿಯ ಬೊಂಬೆಯೋ" ಎನ್ನುತ್ತ ಆಟದ ಸಾಮಾನುಗಳೆಲ್ಲವನ್ನೂ ಒಂದೊಂದಾಗಿ ನೋಡುತ್ತಾ ಸಮುದ್ರದ ತೀರಕ್ಕೆ ಹೋದರು.

೨

ಶಾಲ್ಯದಲ್ಲಿ ಪೊನ್ನಮ್ಮಾಪೇಟೆಯ ಪೆರಿಯಣ್ಣ ನೊವಲ ಬೀದಿಯಲ್ಲಿ ಬಡವರಾದ ಒಂದು ನೆಯ್ಗೆವರ ಕುಟುಂಬ. ವೈಯಾಪುರಿಗೆ ಮೂವತ್ತು ವರ್ಷ. ಅವನ ತಂಗಿ ದೇವಾನೆಗೆ ಇಪ್ಪತ್ತು ವರ್ಷ. ಮದುವೆಯಾಗಿರಲಿಲ್ಲ. ತಾಯಿಯ ಹೆಸರು ಪಳನಿಯಮ್ಮಾಳ್. ಮೂವರೂ ತಮಗೆ ಪರಂಪರೆಯಾಗಿ ಬಂದ ಕೈಮಗ್ಗದಿಂದ ಕಷ್ಟಜೀವನವನ್ನು ನಡೆಸುತ್ತ ಬಂದರು. ದಿನವೆಲ್ಲವೂ ದುಡಿದು ವಾರಕ್ಕೆ ನಾಲ್ಕು ರೂಪಾಯಿ ಸಂಪಾದಿಸುತ್ತಿದ್ದರು.

ಬರಬರುತ್ತ ಕೈಮಗ್ಗದ ನೆಯ್ಗೆಯಿಂದ ಮಾಡುವ ವ್ಯಾಪಾರ ಕುಗ್ಗಿ ಹೋಗಿ ಕೂಲಿ ಕಡಿಮೆಯಾಗುತ್ತಲೇ ಬಂದಿತು. ಕೊನೆಗೆ ಕಡಿಮೆಯಾದ ಕೂಲಿಯೂ ಸಹ ಇಲ್ಲದೆ ಅನೇಕರು ಕಷ್ಟಪಟ್ಟರು. ಶಾಲ್ಯದಲ್ಲಿದ್ದ ಅನೇಕ ಮಗ್ಗಗಳೊಂದಿಗೆ ವೈಯಾಪುರಿಯ ಮಗ್ಗವೂ ಸುಮ್ಮನೆ ಬಿದ್ದಿತ್ತು. ದೇವಾನೆ ಇಬ್ಬರು ಬ್ರಾಹ್ಮಣ ಉದ್ಯೋಗಸ್ಥರ ಮನೆಯನ್ನು ಗುಡಿಸುವುದೂ ಸಾರಿಸುವುದೂ ಮುಂತಾದ ಕೆಲಸವನ್ನು ಒಪ್ಪಿಕೊಂಡಳು. ಅದರಲ್ಲಿ ತಿಂಗಳಿಗೆ ಮೂರು ರೂಪಾಯಿ ಸಿಕ್ಕಿತು. ತಾಯಿಯಾದ ಪಳನಿಯಮ್ಮನೂ ಮತ್ತೊಂದು ಮನೆಯಲ್ಲಿ ಗುಡಿಸಿ ಸಾರಿಸಿ ಒಂದು ರೂಪಾಯಿಯಂತೆ ಸಂಪಾದಿಸಿದಳು. ವೈಯಾಪುರಿ ನೆಯ್ಗೆಯ ಬಂಡವಾಳಗಾರರ ಬಳಿ ಕೆಲಸಕ್ಕಾಗಿ ತಿರುಗಾಡಿದನು. ಎಲ್ಲಿಯೂ ಕೆಲಸ ಸಿಕ್ಕದೆ ಹೋಯಿತು. ಕೆಲವು ದಿನಗಳಾದ ಮೇಲೆ ಬೇಸತ್ತು ತನ್ನ ತಾಯಿಯ ಹತ್ತಿರ ಹೇಳಿ ಬೆಂಗಳೂರಿಗೆ ಹೊರಟುಹೋದನು. ಅಲ್ಲಿ ಯಾವುದಾದರೂ ಗಿರಣಿಯಲ್ಲಿ ಕೆಲಸವನ್ನು ಹುಡುಕೋಣವೆಂದು ಅವನೂ ಇನ್ನೂ ಅವನ ಜಾತಿಯವರಾದ ಕೆಲವರೂ ಅವನೊಂದಿಗೆ ಹೊರಟರು.

ಹೋಗಿ ಕೆಲವು ದಿನಗಳು ಅಲೆದಾಡಿ ವೈಯಾಪುರಿ ಒಂದು ಮಿಲ್ಲಿನಲ್ಲಿ ಸೇರಿದುದಾಗಿ ಕಾಗದ ಬರೆದನು. ವೈಯಾಪುರಿಗೆ ಓದುಬರೆಹ ಸ್ವಲ್ಪ ಬರುತ್ತಿತ್ತು. ಸಣ್ಣ ವಯಸ್ಸಿನಲ್ಲಿ ಅವನ ತಂದೆಯವರು ಅವನನ್ನು ಪೊನ್ನಮ್ಮಾಪೇಟೆಯ ಮುನಿಸಿಪಲ್ ಸ್ಕೂಲಿಗೆ ಸೇರಿಸಿದ್ದರು. ಆ ಕಾಲದಲ್ಲಿ ನೆಯ್ಗೆಯವರ ಬಾಳು ಅಷ್ಟು ಕಷ್ಟವಾಗಿರಲಿಲ್ಲ.

"ಬಹಳ ಕಷ್ಟಪಟ್ಟು ಯಾರುಯಾರಿಗೋ ಲಂಚ ಕೊಟ್ಟು ಒಂದು ಮಿಲ್ಲಿನಲ್ಲಿ ಸೇರಿರುವೆನು. ದಿನಕ್ಕೆ ಎಂಟಾಣೆ ಕೂಲಿ. ತಿಂಗಳಿಗೆ ಇಪ್ಪತ್ತಾರು ದಿನದ ಕೆಲಸ. ಆದುದರಿಂದ ಹದಿಮೂರು ರೂಪಾಯಿ ಸಿಕ್ಕುವುದು. ಈ ತಿಂಗಳ ಸಂಬಳ ಊಟದ ಖರ್ಚಿಗೂ ಸಾಲಗಳಿಗೂ ಸರಿಹೋಗುವುದು. ಅನಂತರ ನಿಮಗೆ ತಿಂಗಳಿಗೆ ಎರಡು ರೂಪಾಯಿ ಕಳುಹಿಸಲಾಗುವುದು. ದೇವರಿದ್ದಾನೆ." ಎಂದು ವೈಯಾಪುರಿ ಬರೆದುದನ್ನು ಪಕ್ಕದ ಮನೆ ಮಾರಿಯಪ್ಪ ಮೊದಲಿಯ ಮಗಳು ಓದಿ ಹೇಳಿದಳು. ಮುದುಕಿಗೂ ದೇವಾನೆಗೂ ಉಂಟಾದ ಸಂತೋಷಕ್ಕೆ ಮಿತಿಯೇ ಇಲ್ಲ.

* * * *

ಹತ್ತು ದಿನಗಳು ಕಳೆದ ನಂತರ ಮತ್ತೊಂದು ಕಾಗದ ಬಂದಿತು.

"ತಾಯಿಯವರ ಚರಣಸನ್ನಿಧಿಯಲ್ಲಿ ಸಾಷ್ಟಾಂಗ ನಮಸ್ಕಾರ. ನಾನಿಲ್ಲಿ ದೇವರ ಕೃಪೆಯಿಂದ ಕ್ಷೇಮ. ನೀನೂ ದೇವಾನೆಯೂ ಸುಖವಾಗಿದ್ದೀರೆಂದು ನಂಬುತ್ತೇನೆ. ನನಗೆ ಈ ಗಿರಣಿಯಲ್ಲಿ ಕೆಲಸ ಮಾಡುವುದು ಸರಿಹೋಗುವುದೇ ಇಲ್ಲ. ಮನೆಯಲ್ಲಿ ಮಗ್ಗದ ಮುಂದೆ ಕುಳಿತು ಕೆಲಸ ಮಾಡುತ್ತಿದ್ದ ದಿನಗಳನ್ನು ನೆನೆದು ಕಣ್ಣಿನಲ್ಲಿ ನೀರು ಬರುತ್ತೆ. ಇಲ್ಲಿ ನನಗೆ ಹುಚ್ಚು ಹಿಡಿದಂತೆ ಆಗುತ್ತದೆ. ತಲೆ ಗಿರ್ರೆಂದು ಸುತ್ತಿ ಬರುತ್ತದೆ. ನನ್ನ ಮನಸ್ಸಿನ ವ್ಯಥೆಯನ್ನೂ ಇತರ ಕಷ್ಟಗಳನ್ನೂ ಹೇಳಿ ತೀರದು. ಊರನ್ನು ಬಿಟ್ಟು ಏತಕ್ಕೆ ಬಂದೆನೋ ಎಂದು ತೋರುತ್ತದೆ. ಪಕ್ಕದ ಮನೆಯ ಹುಡುಗನ ಸಹಾಯದಿಂದ ಕಾಗದವನ್ನು ಬರೆಯಲು ಸಾಧ್ಯವಾದರೆ ಬರೆಯಿರಿ. ಮಲ್ಲೇಶ್ವರದ ಕೂಲಿ ಲೈನಿನಲ್ಲಿರುವ ಪೊನ್ನಮ್ಮಾಪೇಟೆಯ ವೈಯಾಪುರಿ ಮೊದಲಿ ಎಂದು ಬರೆಯಿರಿ."

೩

ದೇವಾನೆ ಸಾರಿಸಿ ಗುಡಿಸುತ್ತಿದ್ದ ಮನೆಗಳಲ್ಲಿ ಪೆನ್ಷನ್ ಉದ್ಯೋಗಸ್ಥರ ಮನೆಯೊಂದು. ಅವರ ಹೆಂಡತಿ ಒಳ್ಳೆಯವಳು. ಕೆಲಸ ಮಾಡಿಸುವುದರಲ್ಲಿ ಸ್ವಲ್ಪ ಕಠಿಣವಾದರೂ ಮಿಕ್ಕ ವಿಷಯಗಳಲ್ಲಿ ವಿಶ್ವಾಸದಿಂದಲೇ ನಡೆದುಕೊಳ್ಳು ತ್ತಿದ್ದಳು. ಹಳೆಯ ಸೀರೆಯೊಂದನ್ನು ಕೊಟ್ಟಳು. ಅಡುಗೆ ಮಾಡಿದ್ದರಲ್ಲಿ ಉಳಿದರೆ ಆ ದಿನಗಳಲ್ಲಿ ಸ್ವಲ್ಪ ಅನ್ನವೂ ಹುಳಿಯೂ ಸಿಕ್ಕುತ್ತಿತ್ತು. ಹೀಗೆ ಕೆಲವು ದಿನಗಳು ಕಳೆದವು.

ಇದು ದೈವಕ್ಕೆ ಸಹನೆಯಾಗಲಿಲ್ಲವೆಂದು ಕಾಣುತ್ತೆ! ಆ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಅಡುಗೆಯವನು, ದೇವಾನೆಗೆ ಮಿಗುತ್ತಿದ್ದ ಪದಾರ್ಥ ಗಳನ್ನು ಕೊಡುತ್ತಿದ್ದವನು, ಅವಳೊಂದಿಗೆ ಹಾಸ್ಯವಾಗಿ ಮಾತಾಡಲು ತೊಡಗಿದನು. ಅನಂತರ ಒಂದು ದಿನ ಅಕ್ರಮವಾಗಿ ವರ್ತಿಸಿದನು.

ದೇವಾನೆಗೆ ಸಹಿಸಲಾರದಷ್ಟು ಕೋಪ ಬಂದಿತು. ಆದರೆ ಯಾರಲ್ಲಿ ಹೇಳಿಕೊಳ್ಳುವುದಕ್ಕೂ ನಾಚಿಕೊಂಡು ಹಿಂಜರಿದಳು. "ಯಾರಿಗೂ ಹೇಳ ಬೇಡ. ನಿನಗೆ ತಿಂಗಳಿಗೆ ಎರಡು ರೂಪಾಯಿ ಕೊಡುತ್ತೇನೆ" ಎಂದು ಆ ಅಯೋಗ್ಯನು ಒತ್ತಾಯವಾಗಿ ಹೇಳಿದನು.

ವ್ಯಥೆಯನ್ನು ಅಡಗಿಸಿಕೊಂಡು ದೇವಾನೆ ಮನೆಗೆ ಹೋಗಿ ತಾಯಿಯ ಬಳಿ "ನಾನು ಆ ಬೇವಿನ ಮರದ ಮನೆಯಲ್ಲಿ ಕೆಲಸ ಮಾಡಲು ಆಗುವು ದಿಲ್ಲಮ್ಮಾ" ಎಂದಳು.

ಕಾರಣವೇನೆಂದು ವಿಚಾರಿಸಲು, ದೇವಾನೆಯು ನಾಚಿಕೊಂಡು ಬಹಳ ದುಃಖದಿಂದ ನಡೆದುದನ್ನು ಹೇಳಿದಳು. ಮುದುಕಿ "ನಾನು ಆ ಮನೆಯ ಯಜಮಾನಿಯ ಬಳಿ ಹೇಳುತ್ತೇನೆ" ಎಂದು ಎದ್ದಳು.

"ಬೇಡವಮ್ಮ, ಅವರ ಹತ್ತಿರ ಹೇಳಿ ಏನು ಪ್ರಯೋಜನ? ನಾನು ಮತ್ತೆ ಅಲ್ಲಿ ಕೆಲಸ ಮಾಡುವುದು ಸಾಧ್ಯವಿಲ್ಲ" ಎಂದಳು.

ಬೇರೆ ಕಡೆ ಕೆಲಸಕ್ಕಾಗಿ ನೋಡಿದರು. ಒಂದೊಂದು ಮನೆಯಲ್ಲಿಯೂ ಯಾರಾದರೂ ಕೆಲಸಕ್ಕೆ ಇದ್ದೇ ಇದ್ದರು. ಎರಡು ತಿಂಗಳು ಅಲೆದಾಡಿ ಒಂದು ಮನೆಯನ್ನು ಗೊತ್ತುಮಾಡಿಕೊಂಡರು.

*     *     *     *

ಆರು ತಿಂಗಳುಗಳಾದುವು. ಬೆಂಗಳೂರಿನಲ್ಲಿ ವೈಯಾಪುರಿ ಇದ್ದ ಗಿರಣಿಯಲ್ಲಿ ಒಂದು ಮುಷ್ಕರ ನಡೆಯಿತು. ಒಬ್ಬ ಮೇಸ್ತ್ರಿಯನ್ನು ದೊರೆಯು ಹೊಡೆದುಬಿಟ್ಟನು ಆದುದರಿಂದ ಅವನನ್ನೂ ಇನ್ನೂ ಕೆಲವು ಕೂಲಿಗಳನ್ನೂ ಕೆಲಸದಿಂದ ತೆಗೆದು ಹಾಕಿದರು. ಈ ಕಾರಣದಿಂದ ಕೆಲಸಗಾರರ ಸಂಘದಲ್ಲಿ ಸಭೆ ಸೇರಿ ಆ ತಿಂಗಳು ಕೂಲಿ ತೆಗೆದುಕೊಂಡ ಕೂಡಲೆ ಕೆಲಸವನ್ನು ನಿಲ್ಲಿಸ ಬೇಕೆಂದು ನಿಶ್ಚಯಿಸಿದರು. ವೈಯಾಪುರಿಯೂ ಇದರಲ್ಲಿ ಸೇರಬೇಕಾಯಿತು.

ಒಂದು ತಿಂಗಳು ಮುಷ್ಕರ ನಡೆಯಿತು. ಕೂಲಿಗಾರರು ಅನೇಕ ಸಭೆಗಳನ್ನು ಮಾಡಿ ಚಳವಳಿ ನಡೆಸಿದರು. ಮೊದಲಿನಲ್ಲಿ ಉತ್ಸಾಹ ಹೆಚ್ಚಾಗಿ ದ್ದಿತು. ಅನಂತರ ಕೈಯಲ್ಲಿದ್ದ ಕಾಸು ಖರ್ಚಾದ ಕೂಡಲೆ ಉತ್ಸಾಹ ಕಡಿಮೆಯಾಯಿತು. ಸರಕಾರದ ಉದ್ಯೋಗಸ್ಥರು ಕೆಲವರು ಬಂದು ರಾಜಿ ಮಾಡಿಸಿದರು. ಎಲ್ಲರೂ ಮತ್ತೆ ಗಿರಣಿಗೆ ಹೋದರು. ಒಂದು ವಾರವಾದ ಮೇಲೆ ಇಪ್ಪತ್ತೈದು ಜನರನ್ನು ಕೆಲಸದಿಂದ ತಳ್ಳಿಹಾಕಿದ ಹಾಗೂ ಗಿರಣಿ ಯೊಳಕ್ಕೆ ಬರಕೂಡದೆಂದೂ ಗೇಟಿನ ಹೊರಗೆ ಪ್ರಕಟನೆಯನ್ನು ಹಾಕಿ ಅವರನ್ನು ಕಳುಹಿಸಿಬಿಟ್ಟರು. ಆ ಇಪ್ಪತ್ತೈದು ಜನರಲ್ಲಿ ವೈಯಾಪುರಿ ಯೊಬ್ಬನು.

"ನಾನೊಂದು ಪಾಪವನ್ನೂ ಅರಿಯೆನು. ನಾನು ಹೊಸದಾಗಿ ಬಂದ ವನು. ನಾನು ಯಾವುದರಲ್ಲಿಯೂ ಸೇರಲಿಲ್ಲವಲ್ಲಾ" ಎಂದು ವೈಯಾಪುರಿ ತನ್ನ ಮೇಸ್ತ್ರಿಯ ಬಳಿ ಕೇಳಿಕೊಂಡನು.

"ದೊಡ್ಡ ದೊರೆಯ ಆಜ್ಞೆ. ಆ ಕಡು ಪಾಪಿ 'ಟೈಂ ಕೀಪರ್' ರಂಗ ಸ್ವಾಮಿ ನಾಯಕನು ಮಾಡಿದ ಕೆಲಸ. ನಿನ್ನ ಹೆಸರನ್ನೂ ಸೇರಿಸಿ ದೊರೆಗೆ ಕೊಟ್ಟುಬಿಟ್ಟನು. ನಾನೇನೂ ಮಾಡಲು ಸಾಧ್ಯವಿಲ್ಲ" ಎಂದು ಮೇಸ್ತ್ರಿ ಹೇಳಿಬಿಟ್ಟನು.

ರಂಗಸ್ವಾಮಿನಾಯಕನ ಬಳಿ ಹೋಗಿ ಬೇಡಿಕೊಂಡನು. ಅವನು "ನನಗೇನೂ ತಿಳಿಯದು. ಸಂಬಳ ಬಟವಾಡೆ ಮಾಡುವ ಗುಮಾಸ್ತೆಯಾದ ಅಯ್ಯರು ಮಾಡಿದುದು" ಎಂದನು.

ಯಾರ ಬಳಿಗೆ ಹೋಗಿ ಬೇಡಿದರೂ ಫಲವಿಲ್ಲದೆ ಹೋಯಿತು. "ನೀನು ಓದುಬರೆಹ ತಿಳಿದವನು, ಇತರರನ್ನು ಪ್ರೇರಿಸಿದವನು. ನಿನ್ನನ್ನು ತೆಗೆದು ಕೊಳ್ಳಲು ಸಾಧ್ಯವಿಲ್ಲ" ಎಂದು ಮ್ಯಾನೇಜರ್ ಹೇಳಿಬಿಟ್ಟರು.

ಹಲವು ದಿನಗಳು ಅಲೆದು ಕೈಯಲ್ಲಿದ್ದ ಕಾಸೆಲ್ಲವೂ ಖರ್ಚಾಗಿ ಬಹಳ ಕಷ್ಟಕ್ಕೆ ಬಿದ್ದು ವೈಯಾಪುರಿ ಮದರಾಸಿಗೆ ಹೋಗಿ ಸೇರಿದನು. ಅವನಂತೆಯೇ ಕೆಲಸ ಕಳೆದುಕೊಂಡ ಇನ್ನೂ ಹತ್ತು ಗಿರಣಿ ಕೂಲಿಗಳು ಅವನ ಜೊತೆಗೆ ಮದರಾಸಿನಲ್ಲಿ ಕೆಲಸವನ್ನು ಹುಡುಕಲು ಹೋದರು. ಊಟಕ್ಕೆಂದು ತಮ್ಮಲ್ಲಿ ಕೆಲವರ ಹತ್ತಿರವಿದ್ದ ಹಣವನ್ನು ಎಲ್ಲರೂ ಸಾಲವಾಗಿ ಹಂಚಿಕೊಂಡು ಎಂಟು ದಿನಗಳು ಒಂದು ಗಿರಣಿಯಿಂದ ಮತ್ತೊಂದಕ್ಕೆ ತಿರುಗಾಡಿದರು. ವೈಯಾಪುರಿಗೆ ಒಂದು ಗಿರಣಿಯಲ್ಲಿ ಕೆಲಸ ಸಿಕ್ಕಿತು.

'ಗೇಟ್'ನ ಬಳಿಯಿದ್ದವನಿಗೂ ಚಿಲ್ಲರೆ ಉದ್ಯೋಗಸ್ಥರಿಗೂ ಕೊಡ ಬೇಕಾಗಿದ್ದ ಮಾಮೂಲುಗಳಿಗಾಗಿ ಐದು ರೂಪಾಯಿ ಬೇಕಾಯಿತು. ಅದ ಕ್ಕಾಗಿಯೂ ಊಟದ ಖರ್ಚು ಮೊದಲಾದ ಸಾಲವನ್ನು ತೀರಿಸಲೂ ತನ್ನ ಕಿವಿಯಲ್ಲಿದ್ದ ಕಡಕನ್ನು ಒಬ್ಬನಲ್ಲಿ ಒತ್ತೆ ಯಿಕ್ಕಿ ಹಣವನ್ನು ಪಡೆದನು. ವೈಯಾಪುರಿ ಮದರಾಸಿನ ಗಿರಣಿಯಲ್ಲಿ ಕೆಲಸಕ್ಕೆ ಸೇರಿದ ಕೆಲವು ದಿನಗಳ ಲ್ಲಿಯೇ ಕಷ್ಟವನ್ನು ಮರೆಯಲು ಹೆಂಡ ಕುಡಿಯುವುದನ್ನು ಆರಂಭಿಸಿಬಿಟ್ಟನು. ಶಾಲ್ಯದಲ್ಲಿ ಅವನಿಗೆ ಈ ಅಭ್ಯಾಸವಿರಲಿಲ್ಲ. ಅನಂತರ ಜೂಜಿನಾಟದಲ್ಲಿ ಸಂಪಾದಿಸಬಹುದೆಂದು ಜೊತೆಯವರು ಕೆಲವರು ಅವನಿಗೆ ದಾರಿ ತೋರಿಸಿ ಆ ಅಭ್ಯಾಸವೂ ಉಂಟಾಯಿತು. ಸಂಪಾದಿಸುವ ಕೂಲಿಯಲ್ಲಿ ಊಟದ ಖರ್ಚು, ಗುಡಸಿಲಿನ ಬಾಡಿಗೆ ಮೊದಲಾದುವು ಹೋಗಲಾಗಿ ಉಳಿದುದು ಊರಿಗೆ ಕಳುಹಿಸುವುದಕ್ಕೆ ಬದಲಾಗಿ ಈ ಬಗೆಯ ಹಲವು ರೀತಿಯ ಖರ್ಚು ಗಳಿಗೇ ಆಯಿತು. ಪಠಾನನ ಹತ್ತಿರ ಸಾಲನಾಯಿತು ಈ ಕಷ್ಟಗಳೆಲ್ಲ ವನ್ನೂ ಸಹಿಸಲಾರದೆ ಇನ್ನೂ ಹೆಚ್ಚಾಗಿ ಕುಡಿಯಲಾರಂಭಿಸಿದನು.

ಮೊದಲು ಏನೋ ನೆಪವನ್ನು ಹೇಳಿಕೊಳ್ಳುತ್ತಲೂ, ಅನಂತರ ತನ್ನಿಂದ ಏನನ್ನೂ ಕಳುಹಿಸಲಾಗಲಾರದೆಂದೂ, ಬೇಕಾಗಿದ್ದರೆ ದೇವಾ ನೆಯೂ ಮದರಾಸಿಗೆ ಬಂದು ಒಂದು ಗಿರಣಿಯಲ್ಲಿ ಕೆಲಸಕ್ಕೆ ಸೇರಬಹುದೆಂದೂ

ಬರೆದುಬಿಟ್ಟನು. ಆ ಕಾಗದವನ್ನು ನೋಡಿ ದೇವಾನೆಗೂ ಪಳನಿಯಮ್ಮ ನಿಗೂ ಗಾಬರಿಯೂ ದುಃಖವೂ ಉಂಟಾಯಿತು.

ಹಲವು ದಿನಗಳು ತಡೆದುಕೊಂಡು ಅನಂತರ ಒಂದು ದಿನ "ಏತಕ್ಕಮ್ಮ ನಾನೂ ಮದರಾಸಿಗೆ ಹೋಗಬಾರದು? ವೈಯಾಪುರಿಯೊಂದಿಗೆ ನಾನೂ ಕಷ್ಟಪಟ್ಟು ಕೆಲಸ ಮಾಡಿ ಏನನ್ನಾದರೂ ಸಂಪಾದಿಸಿ ನಿನಗೆ ಕಳುಹಿಸುತ್ತೇನೆ. ಮದರಾಸಿನಲ್ಲಿ ಹೆಂಗಸರನೇಕರು ಗಿರಣಿಯಲ್ಲಿ ಕೆಲಸ ಮಾಡುತ್ತಾರಂತೆ" ಎಂದಳು ದೇವಾನೆ.

ತಾಯಿಯು ಮೊದಲು ಒಪ್ಪಲಿಲ್ಲ. "ಅದು ಎಲ್ಲಿಯಾದರೆ ಉಂಟೇ? ಅರಿಯದ ಮಗು ಅಲ್ಲೆಲ್ಲ ಹೋಗುವುದೆಂದರೇನು?" ಎಂದಳು. ಕೆಲವು ದಿನಗಳು ಹೀಗೆಯೇ ಚರ್ಚೆ ನಡೆದು, ಅನಂತರ ಮುದುಕಿಯೂ ಸಮ್ಮತಿಸಿದಳು. ಪಕ್ಕದ ಮನೆಯ ಮಾರಪ್ಪನ ಜೊತೆಗೆ ತನ್ನ ಕಿವಿಯಲ್ಲಿದ್ದ ಚಿನ್ನದ ಬೆಂಡೋಲೆಯನ್ನು ಒತ್ತೆಯಿಟ್ಟು ಹನ್ನೆರಡು ರೂಪಾಯಿ ಸಾಲ ತೆಗೆದುಕೊಂಡು ದೇವಾನೆಯು ಮದರಾಸಿಗೆ ಹೊರಟಳು

೪

ಮದರಾಸಿನಲ್ಲಿ ವೈಯಾಪುರಿ ದೇವಾನೆಯನ್ನು ಒಂದು ಗಿರಣಿಯಲ್ಲಿ ನೂಲುವ ಭಾಗದಲ್ಲಿ ಸೇರಿಸಿದನು. ವೈಯಾಪುರಿ ಇದ್ದ ಗಿರಣಿ ಬೇರೆ, ಇದು ಬೇರೆ. ಇವಳ ಹಾಗೆ ಸುಮಾರು ೧೫೦ ಹೆಂಗಸರು, ಸಣ್ಣವರೂ ದೊಡ್ಡವರೂ ಆ ಗಿರಣಿಯಲ್ಲಿ ಕೆಲಸ ಮಾಡುತ್ತಿದ್ದರು. ದೇವಾನೆಗೂ ಅವಳೊಡನೆ ಕೆಲಸ ಮಾಡುತ್ತಿದ್ದ ಹತ್ತು ಜನರ ಮೇಲ್ವಿಚಾರಣೆಗೆ 'ಜಾಬರ್' ಒಬ್ಬನಿದ್ದನು. ಇವನು ಮೊದಲು ದೇವಾನೆಯ ವಿಷಯದಲ್ಲಿ ಬಹಳ ವಿಶ್ವಾಸದಿಂದ ನಡೆದುಕೊಳ್ಳುತ್ತಿದ್ದನು. ಅನಂತರ ಕೆಲಸದ ವಿಷಯದಲ್ಲಿ ಸ್ವಲ್ಪ ಗದರಿಸಲು ಪ್ರಾರಂಭಿಸಿದನು. ಬಯ್ಯುವುದೂ ಉಂಟು. ಒಬ್ಬಳನ್ನಾಗಿ ನೋಡಿದ ಸಮಯಗಳಲ್ಲಿ ಕಾರಣವಿಲ್ಲದೆ ಬಹಳ ಸರಸದಿಂದ ಮಾತಾಡಿಸುವನು.

"ಇದೇನು-ಇವರು ಹೀಗೆ ಮಾಡುತ್ತಾರೆ?" ಎಂದು ತನ್ನ ಜೊತೆಗೆ ಕೆಲಸ ಮಾಡುತ್ತಿದ್ದವಳೊಬ್ಬಳನ್ನು ದೇವಾನೆ ಕೇಳಿದಳು. ಅವಳು ನಕ್ಕು, "ನಿನಗಿದು ತಿಳಿಯದೇ? ನೀನು ಪಾಪ ಹಳ್ಳಿಯವಳು. ಅವರ ಹತ್ತಿರ ಸರಿಯಾಗಿ ನಡೆದುಕೊಳ್ಳದಿದ್ದರೆ ಸಂಬಳದಲ್ಲಿ ಅರ್ಧಕ್ಕಿಂತಲೂ ಹೆಚ್ಚಾಗಿಯೇ ಜುಲ್ಮಾನೆ ಹಾಕಿ ಹಿಡಿದು ಬಿಡುವರು. ಅವರು ಸಂತೋಷವಾಗಿದ್ದರೆ ಹಲವು ಸೌಕರ್ಯಗಳುಂಟು" ಎಂದಳು.

ಬಡವರ ಕಷ್ಟವನ್ನು ಯಾರು ಬಲ್ಲರು? ಅದರಲ್ಲಿಯೂ ಬಡ ಹೆಂಗಸಾಗಿ ಹುಟ್ಟಿ ಗಿರಣಿಯಲ್ಲಿ ಕೂಲಿ ಕೆಲಸಕ್ಕೆ ಸೇರುವುದು ಹಿಂದಿನ ಜನ್ಮದಲ್ಲಿ ಪಾಪ ಮಾಡಿದ್ದವರೆಂದೇ ಹೇಳಬಹುದು.

ದೇವಾನೆ ಕೆಲವು ದಿನಗಳು ಎಲ್ಲವನ್ನೂ ಸಹಿಸಿಕೊಂಡು ಬಂದಳು. ಅನಂತರ ದೈವವಾವುದೆನ್ನುವ ನಿರ್ಲಕ್ಷ್ಯಭಾವದಿಂದ ಮೇಸ್ತ್ರಿಯ ನಡತೆಯನ್ನು ಎದುರಿಸುವುದನ್ನು ಬಿಟ್ಟಳು. ಮನಸ್ಸನ್ನು ಸಮಾಧಾನಗೊಳಿಸಿಕೊಂಡು ಅವನೊಡನೆ ನಕ್ಕು ಮಾತನಾಡುವುದಕ್ಕೆ ಆರಂಭಿಸಿದಳು. ಬರಬರುತ್ತ ಅದರಲ್ಲಿ ಸಂತೋಷವನ್ನೂ ಪಡೆಯುವವಳಾದಳು. ಕೂಲಿಯೂ ಹೆಚ್ಚಿತು.

ಕೆಲವು ತಿಂಗಳು ಕಳೆದವು. ದೇವಾನೆಗೆ ಮೈಯಲ್ಲಿ ತೊಂದರೆಗಳು ಕಂಡವು. ಗರ್ಭವತಿಯಾಗಿರುವಳೆಂದು ತಿಳಿದುಕೊಂಡಳು. ತನಗೆ ತಿಳಿದ ದೈವಗಳೆಲ್ಲವನ್ನೂ ಬೇಡಿಕೊಂಡಳು. "ಯಾರ ಬಳಿ ಹೇಳಿಕೊಳ್ಳಲಿ?" ಎಂದು ಕಾಡಿನಲ್ಲಿ ಬೇಟೆಯಿಂದ ತಪ್ಪಿಸಿಕೊಂಡು ಓಡುವ ಜಿಂಕೆಯಂತೆ ಭಯಗೊಂಡು ಒದ್ದಾಡಿದಳು. ಅಣ್ಣನಾದ ವೈಯಾಪುರಿಯ ಹತ್ತಿರ ಹೇಳಲು ಅಂಜಿದಳು. ಅವಳೊಡನೆ ಕೆಲಸ ಮಾಡುತ್ತಿದ್ದ ಕೆಲವರು ಅವಳ ಸ್ಥಿತಿಯನ್ನು ತಿಳಿದುಕೊಂಡು ನಕ್ಕು ಹಾಸ್ಯಮಾಡಿದರು. ಊರಿಗೆ ಹೋಗಿಬಿಡೋಣವೇ ಎಂದು ಯೋಚಿಸಿದಳು. ಅನಂತರ ಜಾತಿಯಿಂದ ಬಹಿಷ್ಕಾರ ಹಾಕುವರೇ ಎಂದು ಹೆದರಿದಳು. ತಾಯಿಯು ಇದನ್ನು ಕೇಳಿದರೆ ಹೇಗೆ ಸಹಿಸಿಯಾಳು, ಎಂದು ಊರಿಗೆ ಹೋಗುವ ಯೋಚನೆಯನ್ನು ಬಿಟ್ಟುಬಿಟ್ಟಳು. ದೈವವೇ ಗತಿಯೆಂದು ಧೈರ್ಯತಾಳಿ ಅದೇ ಸ್ಥಿತಿಯಲ್ಲಿ ಗಿರಣಿಯಲ್ಲಿ ಕೆಲಸ ಮಾಡುತ್ತ ಬಂದಳು.

ಒಂದು ದಿನ ಮತ್ತೆ ಮನಸೋತಳು. "ಅಯ್ಯೋ, ನಾನೇನು ಮಾಡಲಿ? ನನ್ನ ಕುಲವನ್ನು ಕೆಡಿಸಿದೆನಲ್ಲಾ" ಎಂದು ಗಟ್ಟಿಯಾಗಿ ಅತ್ತಳು.

ಅವಳ ಸಂಗಾತಿ: "ಭಯಪಡಬೇಡ, ದೇವಾನೆ. ಇದೇನು, ಎಲ್ಲರಿಗೂ ಉಂಟಾಗುವುದೇ ಅಲ್ಲವೇ! ಇದಕ್ಕೆ ಔಷಧವಿರುವುದು. ಕೂಡಲೇ ಇಳಿದು ಹೋಗುವುದು" ಎಂದಳು.

"ಹೌದು! ನಾನು ಕೇಳಿದ್ದೇನೆ. ಆದರೆ ಹೆದರಿಕೆಯಾಗುತ್ತದೆ. ಪ್ರಾಣ ಹೋಗುವುದೋ ಏನೋ! ದೇವರೇ! ನಾನೆಲ್ಲಿ ಹೋಗಿ ಮರೆಯಾಗಲಿ" ಎಂದು ಹಂಬಲಿಸಿದಳು.

ಆ ಗೆಳತಿ: ''ಎರಡು ರೂಪಾಯಿ ಕೊಟ್ಟರೆ ಮುತ್ತುಸ್ವಾಮಿ ಆಚಾರಿ ಬೀದಿಯಲ್ಲಿ ಒಬ್ಬಾಕೆಯಿದ್ದಾಳೆ. ಅವಳೆಲ್ಲವನ್ನೂ ಮಾಡಿಬಿಡುತ್ತಾಳೆ" ಎಂದಳು.

ದೇವಾನೆ: ''ಪೋಲೀಸಿನವರಿಗೆ ತಿಳಿದುಬಿಟ್ಟರೆ ಹಿಡಿದುಕೊಂಡು ಹೋಗುವರಂತೆ?''

ಗೆಳತಿ: ''ಅದಕ್ಕೆಲ್ಲಾ ಭಯಪಡಬೇಡ! ಆಕೆಗೂ ಪೋಲೀಸಿನವರಿಗೂ ಬಹಳ ಸ್ನೇಹ. ರೂಪಾಯಿ ಇದ್ದರೆ ಎಲ್ಲಾ ಆಗುತ್ತೆ. ನಿನಗೆ ತಿಳಿಯದೇ?"

"ಅಯ್ಯೋ, ನಾನು ರೂಪಾಯಿಗೆ ಎಲ್ಲಿ ಹೋಗಲಿ, ದೈವವೇ! ನನ್ನನ್ನು ಹೀಗೆ ಕೈಬಿಡುವುದೇ? ನಾನು ಈ ಹಾಳಾಗಿ ಹೋದ ಊರಿಗೆ ಏತಕ್ಕೆ ಬಂದೆ? ಶಾಲ್ಯದಲ್ಲಿ ಕೂಳಿಲ್ಲದೆ ಸತ್ತಿದ್ದರೂ ಚೆನ್ನಾಗಿತ್ತೇ!'' ಎಂದು ಕೂಗಿ ಕೊಂಡಳು.

೬ ೦ ೦ ೦

ಕೆಲವು ದಿನಗಳಾದ ಮೇಲೆ ಮತ್ತೊಬ್ಬಳು ಬೇರೊಂದು ಯೋಚನೆಯನ್ನು ಹೇಳಿದಳು. "ಕೂಸನ್ನು ಕೊಲ್ಲಕೂಡದಮ್ಮಾ! ಅದು ಮೂರು ಜನ್ಮಕ್ಕೂ ತೀರದ ಪಾಪವಾಗುವುದೆಂದು ಹೇಳುತ್ತಾರೆ. ಗಣೇಶನ ಗುಡಿ ಬೀದಿಯಲ್ಲಿ ಮುದುಕಿಯೊಬ್ಬಳಿದ್ದಾಳೆ. ಅವಳು ಬಹಳ ಒಳ್ಳೆಯವಳು. ಅವಳ ಹತ್ತಿರ ಹೋಗಿ ಇದ್ದೆಯಾದರೆ ಎಲ್ಲಾ ನೋಡಿಕೊಳ್ಳುವಳು. ನಿನ್ನ ಹಾಗೆ ಅನೇಕರು ಅವಳ ಮನೆಯಲ್ಲಿದ್ದು ಮಗುವನ್ನು ಹೆತ್ತಿದ್ದಾರೆ. ನೀನು ಭಯ ಪಡಬೇಡ'' ಎಂದಳು.

"ನೀನು ಮಹಾರಾಯಗಿತ್ತಿಯಾಗಿರು, ಅಕ್ಕಾ" ಎಂದು ದೇವಾನೆ ಅವಳನ್ನು ಹೊಗಳಿದಳು. ಅನಂತರ ದೇವಾನೆ ಗಣೇಶನ ಗುಡಿ ಬೀದಿಯಲ್ಲಿ ವಾಸವಾಗಿದ್ದ ಆ ಪರೋಪಕಾರಿಯಾದ ಮುದುಕಿಯನ್ನು ಹೋಗಿ ಸೇರಿದಳು. ಕ್ರಮವಾಗಿ ಪ್ರಸವವಾಯಿತು. ಕೂಸನ್ನು ಮುಟ್ಟಿ ಎತ್ತಿದ ಕೂಡಲೇ ದೇವಾನೆಗೆ ಲೋಕವೇ ಬೇರೆ ರೂಪವನ್ನು ತಾಳಿತು. ಎಲ್ಲಾ ಕಷ್ಟಗಳನ್ನೂ ಮರೆತುಬಿಟ್ಟಳು. ಕೂಸೊಂದನ್ನೇ ಲೋಕವೆಂದು ಭಾವಿಸಿದಳು.

"ದೈವವು ಕೊಟ್ಟ ಹಸುಳೆ. ಇದೇನು ಮಾಡಿತು ಪಾಪ? ನಾನಾದರೋ ಕುಲಪಾತಕಿ'' ಎಂದು ಕೂಸನ್ನೆತ್ತಿ ಹಾಲು ಕುಡಿಸುವಳು. ಹೀಗೆ ಕೆಲವು ದಿನ ಚಿಂತೆಗಳನ್ನು ಮರೆತಿದ್ದಳು.

''ನೀನು ಕೆಲಸಕ್ಕೆ ಈಗ ಹೋಗಲಾಗದು ದೇವಾನೆ! ಇಲ್ಲಿಯೇ ಇನ್ನೂ ಕೆಲವು ದಿನಗಳಿರು." ಎಂದು ಗಣೇಶನ ಗುಡಿ ಬೀದಿಯಲ್ಲಿದ್ದ ಪರೋಪಕಾರಿ ಮುದುಕಿ ಬಹಳ ಅನುಕಂಪದಿದ ಹೇಳಿದಳು.

"ಇಷ್ಟು ಒಳ್ಳೆಯವರು ಲೋಕದಲ್ಲಿರಲಾಗ ನಾನು ದೇವರನ್ನು ದೂಷಿಸಿದೆನೇ'' ಎಂದು ಹೇಳಿ ದೇವಾನೆ ದೇವರನ್ನು ವಂದಿಸಿದಳು.

ಐದು ತಿಂಗಳಾದ ಮೇಲೆ ನಿಜವು ಗೊತ್ತಾಯಿತು. ಆ ಮುದುಕಿ ದುಷ್ಟರಿಂದ ಮೋಸಗೊಳಿಸಲ್ಪಟ್ಟ ಅನಾಥ ಹುಡುಗಿಯರನ್ನಿಟ್ಟುಕೊಂಡು ಅಕ್ರಮವಾದ ರೀತಿಯಲ್ಲಿ ತನ್ನ ಜೀವನವನ್ನು ನಡೆಸುತ್ತಿದ್ದಳು. ದೇವಾನೆಯೂ ಈ ಬಲೆಗೆ ಸಿಕ್ಕಿಬಿದ್ದಳು. ಅನಂತರ ಅವಳು ಗಿರಣಿಗೆ ಹೋಗಲೇ ಇಲ್ಲ.

೫

"ಶಾಲ್ಯದಲ್ಲಿ ನಮ್ಮ ಮನೆಯಲ್ಲಿ ಕೆಲಸ ಮಾಡುತ್ತಿದ್ದ ದೇವಾನೆ ನಿನಗೆ ಜ್ಞಾಪಕವಿಲ್ಲವೇ? ಅವಳ ಹಾಗೆಯೇ ಇದ್ದಳು ಈ ಭಿಕ್ಷುಕಳು." ಎಂದರು ರಾಮನಾಥಯ್ಯರವರು.

ದೇವಾನೆ ಶಾಲ್ಯದಲ್ಲಿ ಮೊದಲು ಕೆಲಸ ಮಾಡುತ್ತಿದ್ದ ಮನೆ ಯಜಮಾನರಾದ ಪೆನ್ಷನ್ ಉದ್ಯೋಗಸ್ಥರ ಜ್ಯೇಷ್ಠ ಪುತ್ರರೇ ರಾಮನಾಥಯ್ಯ

ರವರು. ಇವರಿಗೆ ಮದರಾಸಿನಲ್ಲಿ ಒಂದು ದೊಡ್ಡ ಬ್ಯಾಂಕಿನಲ್ಲಿ ಕ್ಯಾಷಿಯರ್ ಕೆಲಸ.

"ಶಾಲ್ಯದ ಹುಡುಗಿ ಇಲ್ಲಿ ಏತಕ್ಕೆ ಇರುತ್ತಾಳೆ? ನಿಮಗೆ ಭ್ರಾಂತಿ" ಎಂದಳು ಸೀತಾಲಕ್ಷ್ಮಿ.

"ಏನೋ ಹೇಗೋ-ಯಾರಾಗಿದ್ದರೂ ಕೂಸನ್ನಿಟ್ಟುಕೊಂಡು ಹೀಗೆ ಹೆಂಗುಸರು ಭಿಕ್ಷೆಯೆತ್ತಬೇಕಾಯಿತಲ್ಲ. ನಮ್ಮ ದೇಶ ಯಾವ ಸ್ಥಿತಿಗೆ ಬಂದಿದೆ" ಎಂದರು ರಾಮನಾಥಯ್ಯರವರು

"ನಿಮಗೆ ಯಾವಾಗಲೂ ದೇಶದ್ದೇ ಯೋಚನೆ ನಮ್ಮ ಸಂಸಾರವನ್ನು ಗಮನಿಸಿದರೆ ಸಾಲದೆ?" ಎಂದಳು ಹೆಂಡತಿ.

ಮರುದಿವ ಬೆಳಿಗ್ಗೆಯೂ ರಾಮನಾಥಯ್ಯರಿಗೆ ಆ ಭಿಕ್ಷುಕಳ ಜ್ಞಾಪಕ ಬಿಡಲಿಲ್ಲ. ಆಫೀಸಿನಿಂದ ಚೀನಾ ಬಜಾರಿಗೆ ನೆಟ್ಟಗೆ ಹೋದರು. ಅವಳನ್ನು ಅಲ್ಲಿ ಕಾಣಬಹುದು, ಕಂಡು ವಿಚಾರಿಸಬಹುದು ಎಂದೆಣಿಸಿ ದಾರಿಯಲ್ಲಿ ಹೋಗಿ ಆ ಫಲಹಾರಮಂದಿರದ ಹತ್ತಿರ ಗಾಡಿಯನ್ನು ನಿಲ್ಲಿಸಿ ಸ್ವಲ್ಪ ಹೊತ್ತು ಇದ್ದರು ಅನೇಕ ಭಿಕ್ಷುಕರು ಬಂದು 'ಅಯ್ಯಾ! ಅಯ್ಯಾ!' ಎಂದು ಕೂಗಿಕೊಂಡರು. ಆದರೆ ಅವಳು ಕಾಣಿಸಲಿಲ್ಲ.

ಮುಂದಿನ ಶನಿವಾರ ಸಾಯಂಕಾಲ ರಾಮನಾಥಯ್ಯರವರೂ ಅವರ ಹೆಂಡತಿಯೂ ಮತ್ತೆ ಚೀನಾ ಬಜಾರಿನ ಕಡೆ ಹೋದರು. "ಅಗೋ— ನಿಮ್ಮ ಭಿಕ್ಷುಕಳು'' ಎಂದಳು ಸೀತಾಲಕ್ಷ್ಮಿ.

ಕೂಸನ್ನು ಕೈಯಲ್ಲಿ ಹಿಡಿದು ''ಅಮ್ಮಾ, ಒಂದಾಣೆ ಕೊಡಿ. ಈ ಕೂಸನ್ನು ನೋಡಿಯಮ್ಮಾ'' ಎಂದು ಬೇಡುತ್ತ ಅಲ್ಲಿ ಸ್ವಲ್ಪ ದೂರದಲ್ಲಿ ಬಂದು ನಿಂತಿದ್ದ ಮತ್ತೊಂದು ಮೋಟಾರಿನ ಗಾಡಿಯ ಬಳಿಯಲ್ಲಿ ಓಡುತ್ತ ಹೋಗಿ ನಿಂತಳು.

ರಾಮನಾಥಯ್ಯರವರ ಗಾಡಿಯ ಸುಳಿವನ್ನು ನೋಡಿದ ಕೂಡಲೇ ಇವರಲ್ಲಿರುವವರು ಏನನ್ನೂ ಕೊಡಲಾರರೆಂದು ಆ ಭಿಕ್ಷುಕಳು ಬೇರೆ ಗಾಡಿಯ ಬಳಿ ಹೋದಳು. ಭಿಕ್ಷುಕರಿಗೆ ಇದು ಅನುಭವದಿಂದ ಬರುವ ಬುದ್ಧಿ. ದೂರ ನಿಂತಿರುವ ಭಿಕ್ಷುಕಳನ್ನು ಕೂಗಲು ರಾಮನಾಥಯ್ಯರವರು ಸಂಕೋಚಗೊಂಡರು. ಆದುದರಿಂದ ಸ್ವಲ್ಪ ಹೊತ್ತು ಸುಮ್ಮನಿದ್ದರು.

ಆ ಗಾಡಿಯ ಹತ್ತಿರ ಕೆಲಸ ಮುಗಿದ ಕೂಡಲೇ ತಮ್ಮ ಗಾಡಿಯ ಕಡೆ ಬರುವ ಳೆಂದು ಎಣಿಸಿದರು ಆದರೆ ಅವಳು ಗುಂಪಿನಲ್ಲಿ ಮರೆಯಾಗಿ ಹೋಗಿ ಅನಂತರ ಕಾಣಿಸಲಿಲ್ಲ.

"ಸರಿ, ಹೋಗೋಣ" ಎಂದಳು ಸೀತಾಲಕ್ಷ್ಮಿ.

ಎಂಟು ದಿನಗಳಾದ ಮೇಲೆ ರಾಮನಾಥಯ್ಯರವರೂ ಸೀತಾಲಕ್ಷ್ಮಿಯೂ ಸಿನಿಮಾಕ್ಕೆ ಹೋದರು. ಕಥೆ ನಳೋಪಾಖ್ಯಾನ. ಗೇಟಿನ ಬಳಿ ದೊಡ್ಡ ಗುಂಪು. ಹೊಸ ಸ್ಟಾರ್— ಟಿ. ಕೆ. ಧನಭಾಗ್ಯಂ ದಮಯಂತಿ ಪಾತ್ರ.

"ಎರಡನೆಯ ಆಟಕ್ಕೇ ಹೋಗಲಾಗುವುದು. ಈ ಷೋಗೆ ಟಿಕೆಟ್ಟು ಗಳು ಮುಗಿದುಹೋದವು" ಎಂದರು.

"ಮನೆಗೆ ಹೋಗಿ ಬರೋಣವೇ ?" ಎಂದರು ರಾಮನಾಥಯ್ಯರವರು.

ಸೀತಾಲಕ್ಷ್ಮಿ ಉತ್ತರ ಹೇಳುವದರೊಳಗಾಗಿ ಒಬ್ಬಳು ಮೋಟಾರಿನ ಬಾಗಿಲ ಬಳಿಯಲ್ಲಿ "ಅಮ್ಮಾ, ಭಿಕ್ಷ ಕೊಡಿಯಮ್ಮಾ" ಎಂದಳು.

ಶಾಲ್ಯದ ಹುಡುಗಿಯೋ ಎಂದು ನೋಡಲು ರಾಮನಾಥಯ್ಯರವರು ತಿರುಗಿ ನೋಡಿದರು. ಅವರಿಗೆ ಅದೇ ಹುಚ್ಚು. ಅವಳಲ್ಲ, ಬೇರೊಬ್ಬಳು.

ಸೀತಾಲಕ್ಷ್ಮಿ ಮೋಟಾರ್ ಡ್ರೈವರನಿಗೆ, "ಇಲ್ಲಿ ಗಾಡಿಯನ್ನು ನಿಲ್ಲಿಸಿದರೆ ಭಿಕ್ಷುಕರ ಕಾಟ. ಮನೆಗೆ ಬೇಗನೆ ಓಡಿಸು, ರಾಮನ್ ನಾಯರ್" ಎಂದಳು.

ಅಷ್ಟು ಹೊತ್ತಿಗೆ ಪೋಲೀಸಿನವನೊಬ್ಬನು ದೊಣ್ಣೆಯನ್ನು ಬೀಸಿ ಆ ಭಿಕ್ಷುಕಳನ್ನೋಡಿಸಿದನು.

* * * *

ಆ ರಾತ್ರಿ ರಾಮನಾಥಯ್ಯರವರು ಸ್ವಪ್ನದಲ್ಲಿ ಭಿಕ್ಷುಕಳನ್ನು ಕಂಡರು.

"ನೀನು ದೇವಾನೆಯಲ್ಲವೇ ? ಯಾವ ಊರಿನವಳು ನೀನು ?" ಎಂದರು.

ಸಂತೋಷದಿಂದ ಕಣ್ಣುಗಳರಳಿ ತನ್ನ ಕೂಸನ್ನು ಸವರುತ್ತ "ಸಾಮಿ ! ಸಾಮಿ ! ನೀವು ಶಾಲ್ಯವಲ್ಲವೇ ? ಬೇವಿನ ಮರದ ಮನೆಯ ಮಕ್ಕಳಲ್ಲವೇ ? ? ಎಂದಳು ಭಿಕ್ಷುಕಳು.

"ನಾಯರ್—ಅವಳನ್ನು ಮುಂದೆ ಕುಳ್ಳಿರಿಸಿಕೋ" ಎಂದು ಮೋಟಾರೋಡಿಸುವವನಿಗೆ ಹೇಳಿದರು.

ಮನೆಗೆ ಹೋದ ಕೂಡಲೇ "ಇವಳು ಯಾರು? ಈ ಶನಿಯನ್ನು ಏತಕ್ಕೆ ಮನೆಗೆ ಕರೆದುಕೊಂಡು ಬಂದಿರಿ?" ಎಂದಳು ಹೆಂಡತಿ.

"ನಮ್ಮ ಮನೆಯಲ್ಲಿ ಇವಳನ್ನು ನಾವೇತಕ್ಕೆ ಕೆಲಸಕ್ಕೆ ಇಟ್ಟುಕೊಳ್ಳ ಕೂಡದು? ಊಟ ಹಾಕಿ ನಾಲ್ಕು ರೂಪಾಯಿ ಸಂಬಳ ಕೊಡೋಣ" ಎಂದರು.

"ಒಳ್ಳೆಯ ಯೋಚನೆಯನ್ನು ಮಾಡಿದಿರಿ! ಕೆಟ್ಟುಹೋದುದೆಲ್ಲವನ್ನೂ ಮನೆಯಲ್ಲಿ ಸೇರಿಸಿಕೊಳ್ಳುವುದೆಂದರೇನು? ಒಳ್ಳೆಯ ಬುದ್ಧಿವಂತಿಕೆಯೇ? ಹೋಗು ಹೊರಕ್ಕೆ" ಎಂದಳು ಸೀತಾಲಕ್ಷ್ಮಿ.

"ನಾನು ಕದಿಯುವವಳಲ್ಲವಮ್ಮಾ! ಹೇಳಿದ ಕೆಲಸವೆಲ್ಲವನ್ನೂ ಮಾಡುವೆನಮ್ಮಾ!" ಎಂದಳು ಭಿಕ್ಷುಕಳು.

"ಆಗದು ಹೋಗು ಹೊರಕ್ಕೆ" ಎಂದಳು ಸೀತಾಲಕ್ಷ್ಮಿ.

ಒಂದು ರೂಪಾಯಿಯನ್ನು ಕೊಟ್ಟು ಕಳುಹಿಸೋಣವೆಂದು ರಾಮನಾಥಯ್ಯರವರು ಚೀಲವನ್ನು ತೆಗೆಯಲು ಹೋದರು. ಚೀಲವು ಜೇಬಿನಲ್ಲಿ ಕಾಣಿಸಲಿಲ್ಲ. ಹುಡುಕಾಡಿದರು. ಭಿಕ್ಷುಕಳ ಕೂಸು ಗಟ್ಟಿಯಾಗಿ ಅಳಲಾರಂಭಿಸಿತು. ಎಚ್ಚರಗೊಂಡರು. ಸ್ವಪ್ನ! ತನ್ನ ಕೂಸು ರಾಧಾ ಹಾಸಿಗೆಯಲ್ಲಿ ಕುಳಿತುಕೊಂಡು ಅಳುತ್ತಿತ್ತು.

"ಒಳ್ಳೆಯ ವೇಳೆ—ಸೀತಾಲಕ್ಷ್ಮಿ ನಿಜವಾಗಿ ಇಷ್ಟು ಕ್ರೂರವಾಗಿರಲಾರಳು. ಕನಸೇ ಅಲ್ಲವೇ!" ಎಂದು ರಾಮನಾಥಯ್ಯರವರು ತೃಪ್ತಿಗೊಂಡರು.

* * * *

ಅನಂತರ ಬಹು ದಿನಗಳವರೆಗೂ ರಾಮನಾಥಯ್ಯರವರು ಅಂಗಡಿ, ರೈಲ್ವೇ ಸ್ಟೇಷನ್, ಸಿನೀಮಾ, ಎಲ್ಲೆಲ್ಲಿಯೂ ನೋಡುತ್ತಲೇ ಇದ್ದರು. ಆದರೆ ಆ ಭಿಕ್ಷುಕಳನ್ನು ಮಾತ್ರ ಅವರು ಕಾಣಲೇ ಇಲ್ಲ. ಅವಳೆನಾದಳೋ ಯಾರಿಗೆ ಗೊತ್ತು?

——:o:——

# ೨. ತಾಯಿಯೂ ತಂದೆಯೂ

೧

ಸೇಲಂ ಜಿಲ್ಲಾ ಕೋಕ್ಕಲೆಯೆಂಬ ಗ್ರಾಮದ ವಾಸಿಯಾದ ಅರ್ಧನಾರಿ ಎನ್ನುವ ಹರಿಜನ ಹುಡುಗನು ಶ್ರೀ ಮಲ್ಕಾನಿಯವರೊಡನೆ ದಿಲ್ಲಿಗೆ ಹೋದನು. ಶ್ರೀ ಮಲ್ಕಾನಿಯವರು ಅಖಿಲ ಭಾರತ ಹರಿಜನ ಸೇವಾ ಸಂಘದ ಕಾರ್ಯದರ್ಶಿಗಳು. ದಕ್ಷಿಣ ದೇಶದಲ್ಲಿ ಪ್ರವಾಸ ಮಾಡಲು ಬಂದಿದ್ದರು. ಶಾಲ್ಯದಲ್ಲಿ ಈ ಹುಡುಗನನ್ನು ಕಂಡು ಬಹಳ ಸಂತೋಷಪಟ್ಟು ತಮ್ಮ ಜೊತೆಯಲ್ಲಿಯೇ ದಿಲ್ಲಿಗೆ ಕರೆದುಕೊಂಡು ಹೋದರು. ಅಲ್ಲಿ ಅವನನ್ನು ಶಾಲೆಯಲ್ಲಿ ಸೇರಿಸಿ ಆರು ವರ್ಷಗಳು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಅವನನ್ನು ಬಹಳ ವಿಶ್ವಾಸದಿಂದ ಕಾಣುತ್ತಿದ್ದರು. ಅನಂತರ ದಿಲ್ಲಿಯಲ್ಲಿಯೇ ಪ್ರಬಲವಾದ ಕಂಪನಿ ಮುಖ್ಯಸ್ಥರೊಬ್ಬರಿಗೆ ಹೇಳಿ ಆ ಆಫೀಸಿನಲ್ಲಿ ತಿಂಗಳಿಗೆ ಅರವತ್ತು ರೂಪಾಯಿ ಸಂಬಳದ ಮೇರೆಗೆ ಒಂದು ಉದ್ಯೋಗದಲ್ಲಿ ಅವನನ್ನು ಸೇರಿಸಿದರು. ನೋಡುವುದಕ್ಕೂ ಅವನು ಚೆನ್ನಾಗಿ ಇದ್ದುದು ಮಾತ್ರವಲ್ಲದೆ ಕೆಲಸದಲ್ಲಿ ಯೋಗ್ಯನಾಗಿಯೂ ಚಟುವಟಿಕೆಯಾಗಿಯೂ ಇದ್ದುದರಿಂದ ಬಹು ಶೀಘ್ರದಲ್ಲಿ ಸಂಬಳವು ಹೆಚ್ಚಿತು. ೨೩ ವರ್ಷವಾಗುವುದರೊಳಗಾಗಿ ತಿಂಗಳಿಗೆ ೧೫೦ ರೂಪಾಯಿ ಸಂಬಳವಾಯಿತು. ಸ್ವಲ್ಪ ಕಾಲವಾದನಂತರ ಬೆಂಗಳೂರಲ್ಲಿ ಅದೇ ಕಂಪನಿಗೆ ಸೇರಿದ ದೊಡ್ಡ ನಯ್ಗೆ ಮಿಲ್ಲಿನಲ್ಲಿ ಒಂದು ಕೆಲಸವು ಖಾಲಿಯಾಗಿತ್ತು. ತಿಂಗಳಿಗೆ ೨೦೦ ರೂಪಾಯಿ ಸಂಬಳ. ಅದಕ್ಕೆ ಅರ್ಧನಾರಿ ಕಳುಹಿಸಲ್ಪಟ್ಟನು.

ಅವನು ಬೆಂಗಳೂರಿಗೆ ಹೋಗಿ ಆ ಕೆಲಸದಲ್ಲಿ ಸೇರಿ ಸಂತೋಷವಾಗಿ ಎರಡು ವರ್ಷ ಕಳೆದನು. ಅರ್ಧನಾರಿಗೆ ಮೇಲಿದ್ದ ಉದ್ಯೋಗಸ್ಥರ ಹೆಸರು ಗೋವಿಂದರಾವ್. ಇವರು ವಿಲಾಯತಿಗೆ ಹೋಗಿ ಮ್ಯಾಂಚೆಸ್ಟರಿನಲ್ಲಿ ಎರಡು ವರ್ಷ ಕಾಲವಿದ್ದು ಶಿಕ್ಷಣ ಪಡೆದಿದ್ದರು. ಅವರೂ ಅರ್ಧನಾರಿಯೂ ಹೆಚ್ಚು ಕಡಿಮೆ ಒಂದೇ ವಯಸ್ಸಿನವರು. ಅರ್ಧನಾರಿಯ ಗುಣವೂ ನಡತೆಯೂ

ಅವರಿಗೆ ಬಹಳ ಹಿಡಿದಿದ್ದರಿಂದ ಇಬ್ಬರಲ್ಲಿಯೂ ನಿಕಟವಾದ ಸ್ನೇಹಭಾವವು ಬೆಳೆಯಿತು. ಗೋವಿಂದರಾಯರಿಗೆ ತಂಗಿಯೊಬ್ಬಳು ಪಂಕಜಂ. ತಂಗಿಗೂ ಅಣ್ಣನಿಗೂ ಪರಸ್ಪರ ಬಹು ವಿಶ್ವಾಸ. ಪಂಕಜಳಿಗೆ ೧೦ ವಯಸ್ಸಾಗಿದ್ದಾಗಲೇ ತಾಯಿತಂದೆಗಳಿಬ್ಬರೂ ತೀರಿಹೋದರು. ಈಗ ಪಂಕಜಳಿಗೆ ಇಪ್ಪತ್ತು ವರ್ಷ, ಇನ್ನೂ ಮದುವೆಯಿಲ್ಲ. ಅರ್ಧನಾರಿಯ ಮನೆಗೆ ಗೋವಿಂದರಾಯರು ಹೋಗುವಾಗಲೂ ಅವರ ಮನೆಗೆ ಅರ್ಧನಾರಿ ಬರುವಾಗಲೂ ಪಂಕಜಳು ಜೊತೆಗೇ ಇದ್ದು ಸಂಭಾಷಣೆಯಲ್ಲಿ ಸೇರುತ್ತಿದ್ದಳು. ಹೀಗೆಯೇ ಪಳಗುತ್ತ ಪಂಕಜಳಿಗೂ ಅರ್ಧನಾರಿಗೂ ಸ್ನೇಹಭಾವವು ಹೆಚ್ಚಿದುದನ್ನು ಗೋವಿಂದರಾಯರು ಕಂಡು ಸಂತೋಷವನ್ನೇ ತಾಳಿದರು. "ಏತಕ್ಕೆ ಇವರಿಬ್ಬರೂ ಮದುವೆ ಮಾಡಿಕೊಂಡು ಸುಖವಾಗಿ ಇಲ್ಲಿಯೇ ಇರಬಾರದು ?" ಎಂದು ಹಲವು ವೇಳೆ ಯೋಚಿಸಿದರು.

೨

ಒಂದು ದಿನ ಗೋವಿಂದರಾಯರು ತಂಗಿಯನ್ನು ನೋಡಿ "ಪಂಕಜಂ, ನೀನು ಮದುವೆ ಮಾಡಿಕೊಳ್ಳುವ ವಿಚಾರದಲ್ಲಿ ಯೋಚಿಸಿರುವೆಯಾ ?" ಎಂದರು.

"ಅವಕ್ಕೇನು ? ಮಾಡಿಕೊಂಡರೆ ಆಯಿತು" ಎಂದಳು ಪಂಕಜಂ.

"ಹಾಗಾದರೆ ನಮ್ಮ ಅರ್ಧನಾರಿಗೆ ಏನು ಹೇಳುತ್ತೀಯೆ ?" ಎಂದರು ಗೋವಿಂದರಾಯರು.

ಈ ಪ್ರಶ್ನೆಯಿಂದ ಪಂಕಜಳಿಗೆ ಯಾವ ಜಿಗುಪ್ಸೆಯೂ ತೋರಲಿಲ್ಲ. ಆದರೆ ಉತ್ತರ ಹೇಳದೆ ಬೇರೆ ಯಾವುದೋ ಮಾತನ್ನೆತ್ತಿ ವಿಷಯವನ್ನು ಮೆತ್ತಗೆ ತೇಲಿಸಿಬಿಟ್ಟಳು.

ಕೆಲವು ವಾರಗಳಾದ ಮೇಲೆ ಒಂದು ದಿನ ಯಾವುದೋ ಸಂದರ್ಭ ಒದಗಿದಾಗ ಗೋವಿಂದರಾಯರು ಈ ಪ್ರಶ್ನೆಯನ್ನು ಮತ್ತೆ ಕೇಳಿದುದಕ್ಕೆ "ಏತಕ್ಕೆ ಗೋಪು, ನನ್ನ ವಿಷಯದಲ್ಲಿ ನಿನಗೆ ಜಿಗುಪ್ಸೆಯುಂಟಾಗಿದೆಯೇ ? ನಾನು ನಿನಗೆ ಭಾರವಾಗಿರುವಂತೆ ತೋರುತ್ತದೆ" ಎಂದು ನಗುತ್ತ ಹೇಳಿ ಅನಂತರ ಅಳಲಾರಂಭಿಸಿದಳು.

"ಹುಚ್ಚೀ! ಭಾರ, ಜುಗುಪ್ಸೆಯೆಂದರೇನು? ಯಾರನ್ನಾದರೂ ಮದುವೆ ಮಾಡಿಕೊಳ್ಳುವೆಯೋ ಇಲ್ಲವೋ? ನಿನಗೆ ಅದಿಷ್ಟವಿಲ್ಲದಿದ್ದರೆ ಹೇಳು. ಅದೂ ನನಗೆ ಸಂತೋಷವೇ. ನಾವೆಂದೂ ಅಗಲದೇ ಜೊತೆಯಲ್ಲೇ ಇರಬಹುದು" ಎಂದು ಹೇಳಿ ಅವಳ ಕಣ್ಣುಗಳನ್ನೊರಸಿ ಹೆಗಲ ಮೇಲೆ ಕೈಹಾಕಿ ಮತ್ತೆ "ಅಮ್ಮ ತೀರಿಹೋದಳು. ನಾನೇ ಇದೆಲ್ಲವನ್ನು ಕೇಳಿ ತಿಳಿದುಕೊಳ್ಳಬೇಕು" ಎಂದನು.

"ಸಂಭವಿಸಿದರೆ ಮಾಡಿಕೊಳ್ಳುತ್ತೇನೆ, ಈಗೇನು ಅದಕ್ಕೆ?" ಎಂದಳು ಪಂಕಜಂ.

"ನೀವಿಬ್ಬರೂ ಪರಸ್ಪರ ವಿಶ್ವಾಸದಿಂದ ನಡೆದುಕೊಳ್ಳುತ್ತಿರುವಿರಿ. ನಾವಂತೂ ಜಾತಿಕುಲ ಇವುಗಳನ್ನು ಲಕ್ಷ್ಯಮಾಡುವವರಲ್ಲ. ಅರ್ಧನಾರಿಯನ್ನೇತಕ್ಕೆ ನೀನು ಮದುವೆಯಾಗಬಾರದು?" ಎಂದರು.

"ಜಾತಿಯಲ್ಲಿ ಏನಿದೆ? ಆದರೆ ಅವರ ಮನಸ್ಸು ಹೇಗೋ?" ಎಂದಳು ಪಂಕಜಂ.

"ಅವರ ಮನಸ್ಸೇನು? ನಿನ್ನ ಹಾಗೊಬ್ಬಳನ್ನು ಹೆಂಡತಿಯನ್ನಾಗಿ ಪಡೆಯಬೇಕಾದರೆ ಅವನು ತಪಸ್ಸು ಮಾಡಿರಬೇಕು" ಎಂದು ಗೋವಿಂದ ರಾಯರು ಹೇಳಿದರು. ತಮ್ಮ ತಂಗಿಗೆ ಸಮಾನರಾಗಿ ಲೋಕದಲ್ಲಿ ಯಾರೂ ಇಲ್ಲವೆನ್ನುವುದು ಗೋವಿಂದರಾಯರ ಅಭಿಪ್ರಾಯ.

ಅನಂತರ ಅರ್ಧನಾರಿಯೊಂದಿಗೆ ಈ ವಿಷಯವನ್ನು ಪ್ರಸ್ತಾಪಿಸಿದಾಗ ಅವನ ಸಂತೋಷಕ್ಕೆ ಎಣೆಯೇ ಇಲ್ಲವಾಯಿತು. ಆದರೆ ಒಂದು ನಿಮಿಷದ ನಂತರ ಇದ್ದಕ್ಕಿದ್ದಹಾಗೆ ಮುಖದ ಕಾಂತಿ ಕುಂದಿತು.

"ಇದು ಹೇಗೆ ಸಾಧ್ಯ, ಗೋವಿಂದರಾವ್?" ಎಂದನು.

"ಏತಕ್ಕೆ? ತಡೆಯೇನಿದೆ?" ಎಂದು ಗೋವಿಂದರಾಯರು ಕೇಳಿದರು.

"ನಾನು ಯಾವ ಜಾತಿ? ನೀವು ಯಾವ ಜಾತಿ?" ಎಂದನು ಅರ್ಧನಾರಿ.

"ಜಾತಿಯ ವಿಚಾರವಾಗೇನು ಮಾತು?" ಎಂದು ಗೋವಿಂದರಾಯರು ನಕ್ಕರು. "ಮೊದಲಿಯಾರೇನು? ಬ್ರಾಹ್ಮಣನೇನು? ನಾವಿದೆಲ್ಲವನ್ನೂ

ದೂರ ಮಾಡಿ ಬಹಳ ದಿನಗಳಾದವು. ನೀವಿಬ್ಬರೂ ಸಮ್ಮತಿಸಿ ಪ್ರೀತಿ ತಾಳಿದವರಾಗಿ ತೀರ್ಮಾನಿಸಿದ್ದೀ ಆದರೆ ಜಾತಿಯ ವಿಷಯದಲ್ಲೇನು ಚಿಂತೆ?"

ತಾನು ಕೊಯಂಬತ್ತೂರು ಜಿಲ್ಲೆಗೆ ಸೇರಿದ 'ಶೈವ' ಮೊದಲಿಯಾರೆಂದು ಅರ್ಧನಾರಿ ಅದಕ್ಕೆ ಹಿಂದೆ ಹೇಳಿಕೊಳ್ಳುತ್ತಿದ್ದನು. ಯಾವುದೋ ಒಂದು ಸಂದರ್ಭದಲ್ಲಿ ಗೌರವವನ್ನು ಕಾಪಾಡಿಕೊಳ್ಳುವುದಕ್ಕಾಗಿ ಈ ಸುಳ್ಳನ್ನು ಮೊದಲು ಹೇಳಿ, ಅದನ್ನು ಅನಂತರ ಬದಲಾಯಿಸಲು ಸಾಧ್ಯವಿಲ್ಲದೆ ನಿಜವನ್ನು ಮರೆಮಾಚುತ್ತಲೇ ಬಂದನು. ಈಗ ತನ್ನ ಕುಲವನ್ನು ನಿಜವಾಗಿ ಹೇಳಲು ನಾಚಿಕೆಗೊಂಡನು. ದಿಲ್ಲಿಯಲ್ಲಿದ್ದಾಗ ಅಲ್ಲಿ ಕೆಲವರಿಗೆ ಅವನ ಚರಿತ್ರೆ ಗೊತ್ತಿತ್ತು. ಬೆಂಗಳೂರಲ್ಲಿ ಯಾರಿಗೂ ಅವನ ಪೂರ್ವೋತ್ತರ ಗೊತ್ತಿರಲಿಲ್ಲ.

"ಪಂಕಜಳ ಮನಸ್ಸು ಹೇಗೆ?" ಎಂದನು ಅರ್ಧನಾರಿ.

"ಪಂಕಜಂ ನಿಮ್ಮ ವಿಷಯದಲ್ಲಿ ಪ್ರೀತಿಯಿಂದಲೇ ವರ್ತಿಸುತ್ತಾಳೆ. ನಾನು ಕೇಳಿದ್ದಕ್ಕೆ ಉತ್ತರ ಹೇಳಿದ್ದರಲ್ಲಿ ಸಮ್ಮತಿಸಿದವಳಂತೆಯೇ ತೋರುತ್ತದೆ" ಎಂದರು.

"ನಾನು ಕೇಳಿ ತಿಳಿದುಕೊಳ್ಳುವುದೇ ಅಲ್ಲವೆ ಈಗ ಅನುಸರಿಸಬೇಕಾದ ಕ್ರಮ?'' ಎಂದನು ಅರ್ಧನಾರಿ.

"ಹೌದು'' ಎಂದು ಗೋವಿಂದರಾಯರು ಹೇಳಿದರು.

ಈಗ ಹೀಗೆ ಈ ಪ್ರಸ್ತಾಪವನ್ನು ತಳ್ಳಿಡಲಾಯಿತು. ಪಂಕಜಳೊಡನೆ ನಿಜವನ್ನು ಹೇಳಿಬಿಡಬೇಕೆಂದು ತೀರ್ಮಾನಿಸಿ ಹೇಗೆ ಕೊನೆಗಂಡರೂ ಸರಿಯೇ ಎಂದೆಣಿಸಿದನು. ಆದರೆ ಅನಂತರ ಈ ತೀರ್ಮಾನವನ್ನು ನೆರವೇರಿಸಲು ಧೈರ್ಯ ಬರಲಿಲ್ಲ.

''ಏತಕ್ಕಾಗಿ ನಾಸಿದನ್ನು ಹೇಳಬೇಕು? ಹೇಳಿದರೆ ನನ್ನ ಮೇಲೆ ಪಂಕಜಳಿಗೂ ಗೋವಿಂದರಾಯರಿಗೂ ಜುಗುಪ್ಸೆಯುಂಟಾಗುವುದು. ಜಾತಿ ವ್ಯತ್ಯಾಸವನ್ನು ಲಕ್ಷ್ಯಮಾಡುವುದಿಲ್ಲವೆಂದು ಅವರು ಹೇಳುತ್ತಲೇ ಇರುವರು. ಆದರೂ ನಾನು ಹೊಲೆಯನೆನ್ನುವುದು ತಿಳಿದರೆ ಖಂಡಿತವಾಗಿಯೂ ಸಮ್ಮತಿಸಲಾರರು. ಅಲ್ಲದೆ, ಸುಳ್ಳು ಹೇಳಿದವನಾಗುವೆನು'' ಎಂದು ಈ ಬಗೆಯಾಗಿ ತನ್ನೊಳಗೆ ಆಲೋಚಿಸಿದನು.

ಮರುದಿನ ಮತ್ತೆ ಯೋಚಿಸಿ ನಿಜವನ್ನು ಹೇಳಿಬಿಡೋಣವೆಂದು ಗೋವಿಂದರಾಯರ ಮನೆಗೆ ಹೋದನು. ಆದರೆ ಹೋಗುತ್ತಿರಬೇಕಾದರೆ "ನಾವಿಬ್ಬರೂ ಪ್ರೀತಿಯಿಂದಿರಬೇಕಾದರೆ ಈ ಜಾತಿಯ ಪ್ರಶ್ನೆಗೆ ಸ್ಥಳವೆಲ್ಲಿ? ಈ ಅನ್ಯಾಯಕ್ಕೆ ನಾವೇತಕ್ಕೆ ಅವಕಾಶ ಕೊಟ್ಟು ಬೆಳೆಸಬೇಕು? ಈಜಾತಿಯನ್ನು ಯಾರು ನಿರ್ಮಾಣ ಮಾಡಿದರು? ಅದು ಶುದ್ಧ ಸುಳ್ಳಲ್ಲವೇ? ಅವಳೊಡನೆ ಇದನ್ನು ದೊಡ್ಡ ವಿಷಯವೆಂದು ಭಾವಿಸಿ ಏತಕ್ಕೆ ಹೇಳಬೇಕು? ಅದನ್ನು ಹೇಳಿ ಕೆಲಸವೆಲ್ಲ ಕೆಟ್ಟುಹೋಗುವಂತೆ ಮಾಡುವುದೇ? ಅವರೂ ಜಾತಿಯ ವಿಷಯದಲ್ಲಿ ಚಿಂತೆಯಿಲ್ಲವೆಂದು ಹೇಳಿರುವರು. ಇದರ ಮೇಲೆ ನಾನೇತಕ್ಕೆ ಅದನ್ನು ಕುರಿತು ಮಾತಾಡಬೇಕು?" ಎಂದು ಮನಸ್ಸನ್ನು ಸಮಾಧಾನಪಡಿಸಿಕೊಂಡ. ನಿಜವನ್ನು ಮುಚ್ಚಿಡಲು ತೀರ್ಮಾನಿಸಿದನು.

"ಪಂಕಜ—ನಿಜವಾಗಿಯೂ ನಿನಗಿಷ್ಟವೇ? ನಾವಿಬ್ಬರೂ ಸೇರಿ ನಮ್ಮ ಬಾಳನ್ನು ಮುಂದುವರಿಸೋಣವೇ?" ಎಂದು ಮಾತ್ರ ಕೇಳಿದನು.

"ನಿಮಗಿಷ್ಟವೇ?" ಎಂದಳು ಪಂಕಜಂ

೩

ಅರ್ಧನಾರಿಯ ತಂದೆ ಮುನಿಯಪ್ಪನೂ ಅಣ್ಣನಾದ ರಂಗನೂ, ತಾಯಿಯಾದ ಕುಪ್ಪಾಯಿಯೂ ಕೋಕ್ಕಲೆ ಎನ್ನುವ ಹಳ್ಳಿಯಲ್ಲಿಯೇ ಇದ್ದರು. ಅರ್ಧನಾರಿ ದಿಲ್ಲಿಯಲ್ಲಿದ್ದಾಗಲೂ ಅನಂತರ ಬೆಂಗಳೂರಿಗೆ ಬಂದ ಮೇಲೂ ತಪ್ಪದೆ ಪ್ರತಿ ತಿಂಗಳು ಇಪ್ಪತ್ತು ರೂಪಾಯಿ ಅವರಿಗೆ ಕಳುಹಿಸುತ್ತ ಬಂದನು. ಅವರೂ ಅದರ ಸಹಾಯದಿಂದ ಬಹಳ ಸಂತೋಷವಾಗಿ ಸಂಸಾರವನ್ನು ನಡೆಸುತ್ತ ಬಂದರು. ಹುಡುಗನಿಗೆಷ್ಟು ಸಂಬಳವೆಂದು ಅವರಿಗೆ ತಿಳಿಯದು. ಪ್ರತಿ ತಿಂಗಳೂ ಇಪ್ಪತ್ತು ರೂಪಾಯಿಯೆಂದರೆ ಅದೇ ಕುಬೇರನ ಐಶ್ವರ್ಯವೆಂದು ಭಾವಿಸಿದರು. ಆದರೆ ಮುನಿಯಪ್ಪನಿಗೆ ಬಹಳ ದಿನಗಳಿಂದ ಕುಡಿತದ ಅಭ್ಯಾಸ. ಪ್ರತಿ ತಿಂಗಳೂ ತಪ್ಪದೆ ಹಣ ಬರುತ್ತಿರಬೇಕಾದರೆ ಕುಡಿತವಿನ್ನೂ ಹೆಚ್ಚಾಗಿಬಿಟ್ಟಿತು. ಇದು ರಂಗನಿಗೆ ಸರಿಹೋಗಲಿಲ್ಲ. ಆದರೂ ಅವನಿಂದ ಇದನ್ನು ತಡೆಯಲಾಗಲಿಲ್ಲ. ತಡೆದರೂ ಏನು ಪ್ರಯೋಜನ? ರಂಗನು ಒಂದು ಶಾಲೆಯಲ್ಲಿ ಉಪಾಧ್ಯಾಯನಾಗಿದ್ದನು. ಅವನಿಗಿನ್ನೂ

ಮದುವೆಯಿಲ್ಲ. ಒಂದು ಸ್ಥಳವನ್ನು ನೋಡಿ ಮಾಡಿಕೋ ಎಂದು ತಾಯಿಯು ಒತ್ತಾಯ ಮಾಡಿದಳು. ಈಗ ಬೇಡ, ಕೆಲವು ದಿನಗಳಾಗಲಿ, ಎಂದು ತಳ್ಳಿ ಹಾಕುತ್ತಲೇ ಇದ್ದನು.

ಅರ್ಧನಾರಿ ಬೆಂಗಳೂರಿಗೆ ಬಂದಮೇಲೆ ವರ್ಷಕ್ಕೆರಡು ಬಾರಿ ಕೋಲಕ್ಕ ಲಿಗೆ ಬಂದು ತನ್ನ ತಾಯಿ, ತಂದೆ, ಅಣ್ಣ ಇವರನ್ನು ನೋಡಿ ಹೋಗುತ್ತಿದ್ದನು. ತಂದೆಯು ಕುಡಿಯುವುದನ್ನು ನೋಡಿ ಅರ್ಧನಾರಿಗೆ ಬಹಳ ನಾಚಿಕೆಯೂ ಜುಗುಪ್ಸೆಯೂ ಉಂಟಾಯಿತು. ಮನೆಯಲ್ಲಿದ್ದ ಅಶುದ್ಧತೆಯನ್ನು ನೋಡಿ ಅವನು ಅಸಹ್ಯಗೊಂಡನು. ಬಂದು ಒಂದೆರಡು ದಿನವಿದ್ದು ಬೇಗ ಹಿಂತಿರುಗಿಬಿಟ್ಟನು.

"ನಿನ್ನ ಜೊತೆಗೆ ನಾವು ಬರುತ್ತೇವೆ" ಎಂದು ತಂದೆ ಹೇಳಿದನು.

"ಆಗಲೇಕೂಡದು. ನಿನ್ನನ್ನು ಕಂಡರೆ ನನ್ನನ್ನು ಕೆಲಸದಿಂದ ತಳ್ಳಿ ಹಾಕುವರು" ಎಂದನು ಅರ್ಧನಾರಿ.

"ಹೌದಪ್ಪಾ, ನಾವೆಲ್ಲಾ ಅಲ್ಲಿ ಹೋಗಕೂಡದು" ಎಂದು ರಂಗನೂ ಹೇಳಿದನು.

ಖರ್ಚಿಗೆಂದು ಕಳುಹಿಸುತ್ತಿದ್ದುದರಿಂದ ಇವನ್ನು ಕುರಿತು ಹೆಚ್ಚು ಚರ್ಚೆ ಮಾಡುತ್ತಿರಲಿಲ್ಲ. ಹೀಗೆಯೇ ನಡೆಯುತ್ತ ಬಂದಿತು.

ತಾನು ಪಂಕಜಳನ್ನು ಮದುವೆಯಾಗಿ ಉತ್ತರ ದೇಶಕ್ಕೆ ಮತ್ತೆ ಹೋಗಿಬಿಡಬೇಕೆಂದು ಅರ್ಧನಾರಿಯ ಯೋಚನೆ.

"ಇಷ್ಟು ಪ್ರೀತಿಯಾಗಿದ್ದರೂ ನಾನು ಹೊಲೆಯನೆಂದು ಇವರಿಗೆ ತಿಳಿದುಬಿಟ್ಟರೆ ಖಂಡಿತವಾಗಿಯೂ ಕೆಲಸ ಕೆಡುವುದು. ಒಂದು ವೇಳೆ ಹಾಗಿಲ್ಲವೆಂದರೂ, ಅಯ್ಯೋ, ನನ್ನ ತಾಯಿಯನ್ನೂ, ತಂದೆಯನ್ನೂ ಅವರ ಬಾಳನ್ನೂ ಅವರ ನಡವಳಿಕೆಯನ್ನೂ ಇವರು ಪ್ರತ್ಯಕ್ಷವಾಗಿ ನೋಡಿದರೆ ಅನಂತರ ಪಂಕಜಂ ನನ್ನನ್ನು ಕಣ್ಣೆತ್ತಿಯೂ ನೋಡಲಾರಳು" ಎಂದು ಅರ್ಧನಾರಿ ತನ್ನೊಳಗೆ ಹೇಳಿಕೊಂಡು ಭಯಪಟ್ಟು ತನ್ನ ಸಾಳ್ಳನ್ನು ಸ್ಥಿರ ಮಾಡಿಕೊಂಡನು. ಬೇಗ ಮದುವೆಯನ್ನು ಮುಗಿಸಿಕೊಂಡು ಉತ್ತರಕ್ಕೆ ಎಲ್ಲಿಯಾದರೂ ಒಂದು ಸ್ಥಳಕ್ಕೆ ಹೋಗಿಬಿಡಬೇಕೆಂದು ತೀರ್ಮಾನಿಸಿ ತನ್ನ ಕಂಪೆನಿಯ ಮುಖ್ಯಸ್ಥರಿಗೆ ಕಾಗದಗಳನ್ನು ಬರೆದನು. ದಿಲ್ಲಿಯಲ್ಲಾಗಲಿ,

ಉತ್ತರದಲ್ಲಿ ಬೇರೆ ಯಾವ ಊರಲ್ಲೇ ಆಗಲಿ, ಅವರಿಗೆ ಸೇರಿದ ಗಿರಣಿಗೆ ವರ್ಗಾಯಿಸಿಕೊಳ್ಳುವಂತೆ ಒತ್ತಾಯಪಡಿಸಿ ಬರೆದನು.

೪

ಒಂದು ದಿನ ಇದ್ದಕ್ಕಿದ್ದ ಹಾಗೆ ಪಂಕಜಂ "ಅರ್ಧನಾರಿ, ಅಮ್ಮನನ್ನು ನೋಡಬೇಕೆಂದು ನನಗೆ ಆಸೆ. ಎಲ್ಲರೂ ಒಂದು ವಾರ ರಜಾ ತೆಗೆದುಕೊಂಡು ಕೊಯಂಬತ್ತೂರು, ಉದಕಮಂಡಲ ಮೊದಲಾದ ಸ್ಥಳಗಳನ್ನು ಸುತ್ತಿ ನೋಡಿಕೊಂಡು ಬರೋಣವೆಂದು ಯೋಚನೆ. ಏನು ಹೇಳುತ್ತೀರಿ?" ಎಂದಳು.

"ಬರುವ ತಿಂಗಳು ಮೊದಲನೆಯ ವಾರ ಅನುಕೂಲವಾಗಿರುವುದು. ಆಫೀಸಿನಲ್ಲಿಯೂ ಹೆಚ್ಚು ಕೆಲಸವಿಲ್ಲ" ಎಂದರು ಗೋವಿಂದರಾಯರು.

ಅರ್ಧನಾರಿಗೆ ಗಂಟಲು ಹಿಡಿದಂತಾಯಿತು. "ಅದಕ್ಕೇನು? ಮಾಡಿದರಾಯಿತು. ಆದರೆ ನಮ್ಮೂರಲ್ಲಿ ಈಗ ಬಹಳ ಕಾಲರಾ ಗಲಾಟೆ ಎಂದು ಕಾಗದ ಬಂದಿದೆ" ಎಂದನು. ಹೇಗಾದರೂ ತಪ್ಪಿಸಿಕೊಳ್ಳಲು ಹೀಗೆ ಸುಳ್ಳು ಹೇಳಿದನು.

ಅದನ್ನು ಕೇಳಿ ಪಂಕಜಂ ಬೆಚ್ಚಿಬಿದ್ದು "ಅಯ್ಯೋ! ಕಾಲರಾನೇ? ನಿಮ್ಮ ಮನೆಯವರನ್ನು ಬೇರೆಯೂರಿಗೆ ಹೋಗುವಂತೆ ಹೇಳಿದಿರಾ? ಇಲ್ಲಿ ಬರುವಂತೆ ಹೇಳಿ" ಎಂದಳು.

ಅರ್ಧನಾರಿ "ಅದನ್ನೇ ಯೋಚಿಸುತ್ತಿದ್ದೇನೆ" ಎಂದನು.

ಅನಂತರ ಮೂರು ದಿನಗಳು ಕಳೆದವು. ಅರ್ಧನಾರಿಗೆ ಅಣ್ಣನ ಕಡೆಯಿಂದ ಒಂದು ಕಾಗದ ಬಂದಿತು.

"ತಮ್ಮನಾದ ಅರ್ಧನಾರಿಗೆ ಆಶೀರ್ವಾದ. ಈ ಊರಲ್ಲಿ ವಿಷಭೇದಿ ಬಹಳ ಹೆಚ್ಚಾಗಿದೆ. ಅನೇಕರು ಸತ್ತುಹೋದರು. ನಮಗೆ ಬಹಳ ಭಯವಾಗಿದೆ. ಅಪ್ಪನು ಪೂರ್ವದಂತೆಯೇ ಇದ್ದಾನೆ. ಏನು ಹೇಳಿದರೂ ಕೇಳುವುದಿಲ್ಲ. ನೀನು ಈ ತಿಂಗಳು ಕಳುಹಿಸಿದ ಹಣವೆಲ್ಲವನ್ನೂ ಖರ್ಚು ಮಾಡಿಯಾಯಿತು. ಈಗ ಮೂವತ್ತು ರೂಪಾಯಿ ಕಳುಹಿಸಿದರೆ ಮನೆಗೆ ಬೀಗ

ಹಾಕಿಕೊಂಡು ಸೇಲವ್ನಿಗೆ ಹೋಗಿರೋಣವೆಂದು ಯೋಚನೆ. ಈ ಗಲಾಟೆ ತೀರಿದ ಮೇಲೆ ತಿರುಗಿ ಬರಬಹುದು.

ಇಂತು, ರಂಗ."

ಇದನ್ನೋದಿದ ಕೂಡಲೇ ಅರ್ಧನಾರಿಗೆ ಆಶ್ಚರ್ಯವೂ ಭಯವೂ ಉಂಟಾದವು. "ಇದೇನು, ನಾನೆಣಿಸಿದುದೇನು, ಸುಳ್ಳು ಹೇಳಿದುದೇನು, ಈ ರೀತಿ ವಿಲಕ್ಷಣವಾಗಿ ನಿಜವಾಗಿಬಿಟ್ಟಿದೆ. ಇದೊಂದು ದೈವಪರೀಕ್ಷೆಯೋ ಏನೋ ತಿಳಿಯಲಿಲ್ಲ" ಎಂದು ಅರ್ಧನಾರಿ ತನ್ನೊಳಗೆ ಹೇಳಿಕೊಳ್ಳುತ್ತ ದಿಕ್ಕು ತೋರದವನಾಗಿದ್ದನು ಹಣವನ್ನು ಮರುದಿನ ಕಳುಹಿಸೋಣವೆಂದು ಯೋಚಿಸಿದನು.

ಆ ದಿನ ರಾತ್ರಿ ಅರ್ಧನಾರಿಗೆ ನಿದ್ದೆ ಬರಲಿಲ್ಲ. ಕೆಟ್ಟ ಯೋಚನೆಗಳು-ನಾಚಿಕೆಗೊಳ್ಳಬೇಕಾದ ಯೋಚನೆಗಳು ಅವನ ಮೆದಳನ್ನು ಕಲಕಿ ಕೆಡಿಸುತ್ತಿದ್ದವು ತನ್ನ ತಂದೆಯನ್ನು ನೆನೆಯುವಾಗಲೆಲ್ಲ ಅವನಿಗೆ ಜುಗುಪ್ಸೆಯುಂಟಾಗುತ್ತಿತ್ತು. ಅವನು ಈ ವಿಷಭೇದಿಯಲ್ಲಿ ತೀರಿಹೋದರೆ ವ್ಯಸನವಿಲ್ಲವೆಂದು ಪದೇ ಪದೇ ಅವನ ಮನಸ್ಸಿನಲ್ಲಿ ಯೋಚನೆಯೊಂದು ತೋರುತ್ತಿತ್ತು. ಛೀ! ಇದು ಪಾಪವೆಂದು ಮರುಕ್ಷಣವೇ ಬೇರೆ ಯೋಚನೆ ತೋರುತ್ತಿತ್ತು. ಹೀಗೆ ರಾತ್ರಿಯೆಲ್ಲ ಹಾಸಿಗೆಯಲ್ಲಿ ಹೊರಳಿ ನಿದ್ದೆಯಿಲ್ಲದೆ ಮರುದಿನ ಬೆಳಿಗ್ಗೆ ಎದ್ದು ತಣ್ಣೀರಲ್ಲಿ ಸ್ನಾನ ಮಾಡಿದನು ಅಂಚೆಯವನು ಕಾಗದಗಳನ್ನು ತಂದನು. ನಿರೀಕ್ಷಿಸದಂತೆ ಊರಿಂದ ಮತ್ತೊಂದು ಕಾಗದ ಬಂದಿತ್ತು. ಕೈ ನಡುಗುತ್ತ ಕಾಗದವನ್ನೋದಿದನು.

"ಅಪ್ಪನಿಗೆ ಭೇದಿ ಕಂಡಿದೆ. ಹೇಗಾಗುವುದೋ ಭಯವಾಗಿದೆ. ಮಾರಿಯಮ್ಮ ಕಾಪಾಡಬೇಕು. ಕೈಯಲ್ಲಿ ಒಂದು ಕಾಸೂ ಇಲ್ಲ.—ರಂಗ."

ಕಾಗದ ಓದಿ ಮುಗಿಸಿದ ಕೂಡಲೇ ಅರ್ಧನಾರಿಯ ಮುಖ ಕಳೆಗುಂದಿತು. ಬಹಳ ಹೊತ್ತು ಕುರ್ಚಿಯಲ್ಲಿ ಕೂತೇ ಇದ್ದನು. ಅಂದೂ ಹಣವನ್ನು ಕಳುಹಿಸಲಿಲ್ಲ.

೫

ಮರುದಿನವೂ ಹಣವನ್ನು ಕಳುಹಿಸಲಿಲ್ಲ. ಅಂದು ಯಾವ ಕಾಗದವೂ ಬರಲಿಲ್ಲ.

"ಊರಲ್ಲಿ ಕಾಲರಾ ಸಮಾಚಾರವೇನು ?" ಎಂದು ಪಂಕಜಂ ಕೇಳಿದಳು.

"ಹಾಗೆಯೇ ಇದೆಯಂತೆ" ಎಂದನು ಅರ್ಧನಾರಿ.

"ಕಾಫಿಗೆ ಸಕ್ಕರೆ ಸಾಕೆ ?" ಎಂದು ಗೋವಿಂದರಾಯರು ಕೇಳಿದರು.

"ಸಾಕು, ಬಹಳ ಚೆನ್ನಾಗಿದೆ." ಎಂದನು ಅರ್ಧನಾರಿ. ಅನಂತರ ತನ್ನ ಮನೆಗೆ ಹಿಂತಿರುಗಿದ ಕೂಡಲೆ ಒಂದು ಕಾಗದ ಬಂದು ಕಾದಿದ್ದುದನ್ನು ನೋಡಿದನು

"ಅಮ್ಮನಿಗೂ ಭೇದಿ ಕಂಡಿದೆ. ನೀನು ಹಣವನ್ನು ಕಳುಹಿಸಲಿಲ್ಲ. ದಿಕ್ಕಿಲ್ಲದೆ ಸಾಯುತ್ತಿದ್ದೇವೆ. ಕೂಡಲೇ ಬರಬೇಕು — ರಂಗ"

ಅಂದೂ ಅರ್ಧನಾರಿ ಹಣವನ್ನು ಕಳುಹಿಸಲಿಲ್ಲ. ಇಷ್ಟರಲ್ಲಿ ಮನಸ್ಸನ್ನು ಕಲ್ಲು ಮಾಡಿಕೊಂಡನು "ಅವಮಾನಕ್ಕೆ ಕಾರಣವಾಗಿರುವ ನನ್ನ ನೀಚಜನ್ಮ ಇವರೊಂದಿಗೆ ಮರೆಯಾಗುವುದು. ಇದು ದೇವರೇ ನನಗೊದಗಿಸಿರುವ ಬಿಡುಗಡೆಯಂತೆ ತೋರುವುದು. ದೇವರೇ ಮಾಡುವುದಕ್ಕೆ ಮಿಗಿಲಾಗಿ ಯಾವ ಧರ್ಮ, ಯಾವ ನ್ಯಾಯ ? ಅದನ್ನು ನಾನೇತಕ್ಕೆ ತಡೆಯಬೇಕು. ಅಪ್ಪನೂ ಅಮ್ಮನೂ ತೀರಿಹೋದರೆ ನಾನು ಪಂಕಜಳನ್ನು ಮದುವೆಯಾಗಲು ಯಾವ ಅಡ್ಡಿಯೂ ಇಲ್ಲ" ಎಂದು ಅರ್ಧನಾರಿ ತನ್ನೊಳಗೇ ಹೇಳಿಕೊಂಡನು.

ಮರುಕ್ಷಣವೇ "ಛೀ, ಹೀಗೆ ಎಣಿಸುವುದು ಮಹಾಪಾಪ" ಎಂದು ಯಾರೋ ಬೈದಹಾಗೆ ತೋರಿತು. ತಿರುಗಿ ನೋಡಲು ಪಂಕಜಂ ಬಂದು ಹಿಂದೆ ನಿಂತಳು. ತನ್ನ ಗುಟ್ಟು ಬಯಲಾಯಿತೆಂದು ಬೆಚ್ಚಿಬಿದ್ದನು. ಕೂಡಲೆ ಮತ್ತೆ ಬುದ್ಧಿ ತಿಳಿಯಾಯಿತು. ಚೇತರಿಸಿಕೊಂಡನು. ಯಾರೂ ಮಾತಾಡಲಿಲ್ಲ. ತನ್ನ ಮನಸ್ಸಿನಲ್ಲುಂಟಾದ ಭ್ರಮೆಯೆಂದು ತಿಳಿದುಕೊಂಡನು.

"ಸದ್ದಿಲ್ಲದೆ ಹೇಗೆ ಒಳಗೆ ಬಂದೆ ?" ಎಂದನು.

ಪಂಕಜಂ ನಕ್ಕು "ಬಾಗಿಲನ್ನು ನೂರು ಸಲ ತಟ್ಟಿಯೇ ಬಂದೆನು. ಯಾವುದೋ ಯೋಚನೆಯಲ್ಲಿದ್ದೀರಿ ? ನಾನು ಬಂದುದು ನಿಮಗೆ ಗೊತ್ತಾಗಲಿಲ್ಲ" ಎಂದಳು.

"ನಾನು ಊರಿಗೆ ಹೋಗಬೇಕು. ಕಾಲರಾ ಹೆಚ್ಚಾಗಿದೆಯಂತೆ. ಅಪ್ಪ, ಅಮ್ಮ—ಇಬ್ಬರಿಗೂ ವ್ಯವಸ್ಥೆ ಮಾಡಿ ಬರಬೇಕು" ಎಂದನು.

"ಮೊದಲೇ ಮಾಡಿರಬೇಕಾಗಿತ್ತು. ಈಗ ನೀವಲ್ಲಿ ಹೋದರೆ ಬಹಳ ಜಾಗ್ರತೆಯಾಗಿರಬೇಕು. ಅಲ್ಲಿ ತಣ್ಣೀರು ಕುಡಿಯಕೂಡದು—ಊಟ ಮಾಡಕೂಡದು" ಎಂದಳು.

ಅದೇ ರಾತ್ರಿ ಅರ್ಧನಾರಿ ಸೇಲಮ್ಮಿಗೆ ಹೋದನು. ಆದರೆ ಸೇಲಮ್ಮಿನಲ್ಲಿ ರೈಲಿನಿಂದಿಳಿದು ಕೋಕ್ಕಲೆಗೆ ಕೂಡಲೇ ಹೋಗದೆ ಅಲ್ಲಲ್ಲಿ ಕಾಲ ಕಳೆದು ನಾಲ್ಕು ದಿನಗಳಾದ ಮೇಲೆ ಹೋದನು. ಇವನು ಹೋಗುವುದರೊಳಗಾಗಿ ತಾಯಿಯು ತೀರಿಹೋಗಿದ್ದಳು. ಕೂಡಲೇ ರಂಗನಿಗೂ ಭೇದಿ ಕಂಡು ಅವನೂ ತೀರಿಹೋದನು. ಕುಡುಕನಾದ ತಂದೆಯೊಬ್ಬನು ಮಾತ್ರ ಹೇಗೋ ತಪ್ಪಿಸಿಕೊಂಡು ಉಳಿದನು.

"ನನ್ನನ್ನು ಬೆಂಗಳೂರಿಗೆ ಕರೆದುಕೊಂಡು ಹೋಗು. ಇನ್ನು ನಾನೇ ನಿಲ್ಲಿ ಮಾಡಲಾದೀತು?" ಎಂದು ತಂದೆಯು ಅರ್ಧನಾರಿಯನ್ನು ಬಹಳ ದೈನ್ಯದಿಂದ ಬೇಡಿಕೊಂಡನು. ಅರ್ಧನಾರಿ ಕೇಳಲಿಲ್ಲ. "ಆಗದು" ಎಂದು ಒಂದೇ ಹಟ ಹಿಡಿದು ಹೇಳಿಬಿಟ್ಟನು. "ನಿನಗೆ ಬೇಕಾದ ಹಣವನ್ನು ಕಳುಹಿಸುತ್ತೇನೆ. ನೀನು ಈ ಊರಲ್ಲೇ ಇರು. ನನ್ನ ಜೊತೆಗೆ ಬರಬೇಡ. ಕರೆದುಕೊಂಡು ಹೋಗುವುದು ಸಾಧ್ಯವಿಲ್ಲ" ಎಂದು ಅರ್ಧನಾರಿ ಹೇಳಿದನು. ತಂದೆಯು ದಿಕ್ಕಿಲ್ಲದ ಮಗುವಂತೆ ಅಂಗಲಾಚಿ ಬೇಡಿಕೊಂಡನು. "ಇಲ್ಲೇ ನನ್ನಿಂದ ಇರಲು ಸಾಧ್ಯವಿಲ್ಲ" ಎಂದು ಹೇಳಿ ಬಿಕ್ಕಿ ಬಿಕ್ಕಿ ಅತ್ತನು. ಎಷ್ಟು ಅತ್ತರೂ ಅರ್ಧನಾರಿ ಕೇಳಲಿಲ್ಲ. "ಪಂಕಜಳನ್ನು ಬಿಟ್ಟುಬಿಡಲು ಸಾಧ್ಯವೇ" ಎಂದು ಅರ್ಧನಾರಿ ತನ್ನೊಳಗೆ ಹೇಳಿಕೊಳ್ಳುತ್ತ ತಂದೆ ಅಳುವುದನ್ನೂ ಲಕ್ಷ್ಯಮಾಡಲಿಲ್ಲ. ಮರುದಿನ ಅರ್ಧನಾರಿ ತಂದೆಯ ಕೈಯಲ್ಲಿ ಹತ್ತು ರೂಪಾಯಿ ನೋಟನ್ನು ಕೊಟ್ಟು ಸೇಲಮ್ಮಿಗೆ ಹೋದನು.

೬

"ಏನನ್ನು ಮಾಡಿದೆ! ಹೆತ್ತ ತಾಯಿಯನ್ನೂ ಅಣ್ಣನನ್ನೂ ಕೊಂದು ಬಿಟ್ಟೆನು! ಹೀಗೇತಕ್ಕೆ ಮಾಡಿದೆನು? ನನ್ನಂತಹ ಪಾಪಿ ಲೋಕದಲ್ಲಿರು

ವನೇ? ತಂದೆಯನ್ನು ಹೀಗೆ ನಾನು ತಳ್ಳಿಹಾಕಬಹುದೇ? ಪಂಕಜಳಿಗೆ ಏನನ್ನು ಹೇಳಲಿ?"

ಹೀಗೆ ಬಗೆಬಗೆಯಾದ ಯೋಚನೆಗಳಲ್ಲಿ ಮುಳುಗಿದವನಾಗಿ ರೈಲಿನಲ್ಲಿ ನಿದ್ದೆಯಿಲ್ಲದೆ ಅರ್ಧನಾರಿ ಬೆಂಗಳೂರಿಗೆ ಬಂದು ಸೇರಿದನು. ಮಂಕು ಕವಿದು ಕೊಂಡವನಾಗಿ ರೈಲ್ವೆ ಸ್ಟೇಷನಿನಿಂದ ಮನೆಗೆ ಕಾಲು ನಡಿಗೆಯಿಂದಲೇ ಹೋದನು. ಹಾಸಿಗೆ ಸಾಮಾನುಗಳನ್ನು ಒಂದು ಗಾಡಿಯಲ್ಲಿಟ್ಟು ಮನೆಗೆ ತೆಗೆದುಕೊಂಡು ಹೋಗುವಂತೆ ಹೇಳಿ ತಾನು ನಡೆದುಹೋದನು.

ಮನೆಗೆ ಹೋಗಿ ಬಾಗಿಲಿಗೆ ಚಿಲುಕ ಹಾಕಿ ಮಲಗಿಕೊಂಡನು. ಗೋವಿಂದರಾಯರಿಗಾಗಲಿ ಪಂಕಜಳಿಗಾಗಲಿ ತಾನು ತಿರುಗಿ ಬಂದ ಸಮಾಚಾರವನ್ನು ಹೇಳಿಕಳುಹಿಸಲಿಲ್ಲ; ಆಫೀಸಿಗೂ ಹೋಗಲಿಲ್ಲ.

ರಾತ್ರಿ ಗಂಟೆ ಕಟ್ಟಿ ಯಾರಿಗೂ ಹೇಳದೆ ಮತ್ತೆ ರೈಲಿಗೆ ಹೋಗಿ ಸೇಲಮ್ಮಿಗೆ ಟಿಕೆಟ್ಟು ತೆಗೆದನು.

ಸೇಲಮ್ಮಿಗೆ ಹೋದಕೂಡಲೇ ಕೋಕ್ಕಲಿಯಲ್ಲಿ ಒಬ್ಬ ಆದಿದ್ರಾವಿಡನು ಬಾವಿಯಲ್ಲಿ ಬಿದ್ದು ಸತ್ತನೆಂದು ಯಾರ ವಿಚಾರವನ್ನೋ ಕೆಲವರು ಮಾತಾಡುತ್ತಿದ್ದ ಸುದ್ದಿ ಅವನ ಕಿವಿಗೆ ಬಿದ್ದಿತು. ಕೋಕ್ಕಲಿ ಸೇರಿದ ಕೂಡಲೇ ಹೀಗೆ ಸತ್ತುಹೋದುದು ತನ್ನ ತಂದೆಯೋ ಎಂದು ತಿಳಿಯಿತು. ಪೋಲೀಸ್ ಸ್ಟೇಷನಿನಲ್ಲಿ ಹೆಣವನ್ನು ಹಾಕಿಕೊಂಡು ಏನೋ ಬರೆದುಕೊಳ್ಳುತ್ತಿರುವರೆಂದು ಯಾರೋ ಹೇಳಿದರು. ಆದರೆ ಅತ್ತಕಡೆ ಹೋಗದೆ ಸೇಲಮ್ಮಿಗೆ ತಿರುಗಿ ಹೋಗಿ ಮತ್ತೆ ರೈಲನ್ನು ಹತ್ತಿದನು.

o 		o 		o 		o

"ಪಂಕಜಂ, ನೀನು ನನ್ನನ್ನು ಮರೆತುಬಿಡಬೇಕು" ಎಂದು ಅರ್ಧನಾರಿ ಹೇಳಿದನು.

"ಮರೆತುಬಿಡೋಣ, ಮುಂದಕ್ಕೆ—ಈಗ ಊರಲ್ಲಿ ಏನು ಸಮಾಚಾರ ಹೇಳಿ" ಎಂದಳು ಪಂಕಜಂ.

"ಎಲ್ಲರೂ ಸತ್ತುಹೋದರು. ನಾನು ಮಾಡಬೇಕಾದುದನ್ನು ಮಾಡದಿದ್ದುದರಿಂದ ಸತ್ತುಹೋದರು. ಪಂಕಜಂ! ನನಗೆ ಜೀವನವು ಬೇಸರವಾಗಿದೆ

ನಾನು ಉದ್ಯೋಗವನ್ನು ಬಿಟ್ಟುಬಿಟ್ಟು ಊರಿಗೆ ಹೋಗುತ್ತೇನೆ. ನೀನು ನನ್ನನ್ನು ಮರೆತುಬಿಡಬೇಕು" ಎಂದನು.

ಅವನ ಮುಖವನ್ನು ಎರಡು ಮೂರು ಸಲ ಪಂಕಜಳು ನೋಡಿದಳು. ನೋಡಿ ಭಯಪಟ್ಟಳು. ಕೂಡಲೇ ತನ್ನ ಅಣ್ಣನಿಗೆ ಸಂಗತಿಯನ್ನು ತಿಳಿಸಲು ಹೊರಟಳು.

ಅರ್ಧನಾರಿಗೆ ಜ್ವರಬಂದಿತು. ಮೊದಲಿಲ್ಲಿ ಡಾಕ್ಟರ್ ಟೈಫಾಯಿಡ್ ಎಂದರು. ಹತ್ತು ದಿನಗಳಾದ ಮೇಲೆ ಇದು "ಮುಮ್ಮಳಿನ ಜ್ವರ"ವೆಂದರು. ಗೋವಿಂದರಾಯರೂ ಪಂಕಜಳೂ ಆ ಸ್ಥಳವನ್ನು ಬಿಡದೆ ಹಾಸಿಗೆಯ ಬಳಿ ನೋಡಿಕೊಳ್ಳುತ್ತಿದ್ದರು. ಸ್ವಲ್ಪನೆಯ ವಾರ ಜ್ವರವಿಳಿಯಿತು.

"ಇನ್ನು ಭಯವಿಲ್ಲ" ಎಂದರು ಡಾಕ್ಟರು.

ಅನಂತರ ಕೆಲವು ದಿನಗಳಾದಮೇಲೆ ಜ್ವರ ಪೂರ್ತಿಯಾಗಿ ನಿಂತು ಎದ್ದು ಕೂತುಕೊಂಡನು

○ ○ ○ ○

"ನಾನು ಹೊಲೆಯನು, ಪಾತಕಿಯು ನಿಜವಾಗಿಯೂ ಅಸ್ಪೃಶ್ಯನು—ಸುಳ್ಳುಗಾರನು ನನಗೆ ಮದುವೆ ಬೇಡ. ನನ್ನನ್ನು ನೀವು ಮರೆತುಬಿಡಬೇಕು'' ಎಂದನು ಅರ್ಧನಾರಿ.

ಪಂಕಜಳು ನಕ್ಕಳು. "ನೀವು ಯಾವ ಜಾತಿಯಾದರೇನು ! ನಾವಿಬ್ಬರೂ ವಿತಕ್ಕೆ ಬೇರೆಯಾಗಬೇಕು?" ಎಂದು ಸಮಾಧಾನಪಡಿಸಿದಳು.

ಅರ್ಧನಾರಿ ಒಪ್ಪಲಿಲ್ಲ. "ಜಾತಿಯ ವಿಷಯಕ್ಕಾಗಿ ನೀನು ಹಿಂತೆಗೆಯಲಾರೆ. ಅದು ನನಗೆ ಗೊತ್ತು. ಆದರೆ ನಾನು ಕೊಲೆಪಾತಕನು ನನ್ನ ತಂದೆಯನ್ನೂ ತಾಯಿಯನ್ನೂ ಕೊಂದವನು" ಎಂದು ಎಲ್ಲ ಕತೆಯನ್ನೂ ಹೇಳಿದನು

ಪೂರ್ತಿಯಾಗಿ ವಾಸಿಯಾದ ಕೂಡಲೇ ಅರ್ಧನಾರಿ ತನ್ನ ಕೆಲಸಕ್ಕೆ ರಾಜೀನಾಮೆ ಬರೆದುಕೊಟ್ಟು ಕೋಕ್ಕಲೆಗೆ ಹೋಗಿಬಿಟ್ಟನು. ಈಗ ಕೋಕ್ಕಲೆಯ ಕೇರಿಯಲ್ಲಿ ಮಾರಿಯಮ್ಮನ ಗುಡಿಯಲ್ಲಿ ಶಾಲೆಯನ್ನಿಟ್ಟುಕೊಂಡಿರುವ "ಸ್ವಾಮಿ" (ಸಂನ್ಯಾಸಿಯು) ಅರ್ಧನಾರಿಯೇ.

———

# ೩. ದಿಕ್ಕುಕೆಟ್ಟ ಲಕ್ಷ್ಮಿ

## ೧. ದುರದೃಷ್ಟವನ್ನು ತಂದ ಗಾಡಿ

ಕರಿಯನು ಬೇರೆ ಒಕ್ಕಲನ್ನು (ಸಂಸಾರ) ಹೂಡುವಂತೆ ಮಾಡಿದರು. ಒಕ್ಕಲಿಗರಲ್ಲಿ ಬೇರೆ ಒಕ್ಕಲು ಹೂಡುವುದೆಂದರೆ, ಒಬ್ಬನಿಗೆ ಮದುವೆಮಾಡಿ ಹೆಂಡತಿಯು ಮನೆಗೆ ಬಂದ ಕೂಡಲೆ ಅವರಿಬ್ಬರಿಗೆ ಪ್ರತ್ಯೇಕವಾಗಿ ಒಂದು ಗುಡಿಸಲನ್ನು ಹಾಕಿಕೊಡುವುದು, ಈ ಗುಡಿಸಲಲ್ಲಿ ಗಂಡಹೆಂಡರಿಬ್ಬರೂ ತಮ್ಮ ಜೀವನವನ್ನು ಸಾಗಿಸಬೇಕು. ಇದು ಒಂದು ಒಳ್ಳೆಯ ಪದ್ಧತಿ. ಮೈಮುರಿದು ಕೆಲಸಮಾಡಲು ತಿಳಿಯದ ಉತ್ತಮ ಜಾತಿಯವರಲ್ಲಿ ಇದುವರೆಗೂ ನಡೆದುಬಂದಿರುವ 'ಏಕ ಕುಟುಂಬ ಪದ್ಧತಿ'ಯು ಅನೇಕ ತೊಂದರೆಗಳಿಗೆ ಕಾರಣವಾಗಿದೆಯೆಂದು ಎಲ್ಲರಿಗೂ ತಿಳಿದಿದೆ. ಕರಿಯನ ತಂದೆತಾಯಿಗಳು ಮುಪ್ಪಿನ ಮುದುಕರು. ಅವರು ತಮ್ಮ ಪಿತ್ರಾರ್ಜಿತವಾದ ಮನೆಯಲ್ಲಿ ವಾಸಮಾಡುತ್ತಿದ್ದರು. ಕರಿಯನ ಅಣ್ಣನು ಗದ್ದೆಯ ಬಳಿ ಒಂದು ಗುಡಿಸಲಲ್ಲಿ ಇದ್ದನು. ಈಗ ಕರಿಯನು ಬೇರೆ ಸಂಸಾರವನ್ನು ಹೂಡಬೇಕಾದ್ದರಿಂದ ಜಮೀನನ್ನು ಮೂರು ಭಾಗಮಾಡಿ ಹಂಚಬೇಕಾಯಿತು. ಹಿರಿಯ ಮಗನು ತನ್ನ ಜಮೀನನ್ನೂ ತಂದೆಗೆ ಸೇರಿದ ಜಮೀನನ್ನೂ ನೋಡಿಕೊಂಡನು. ಕರಿಯನಿಗೆ ಒಂದು ಭಾಗವು ಬಂದಿತು. ಉಳಿದ ಅಣ್ಣನು ಅವನಿಗೆ ಒಂದು ಮಣ್ಣುಗುಡಿಸಲನ್ನು ಕಟ್ಟಿಕೊಟ್ಟನು. ಈ ಜಮೀನಿನ ಜೊತೆಗೆ ಕರಿಯನಿಗೆ ಒಂದು ಜೊತೆ ಕರಿ ಎತ್ತು ಎರಡು ಕುರಿಗಳು ಇವುಗಳನ್ನೂ ಕೊಟ್ಟರು.

ಕರಿಯನ ವಯಸ್ಸು ಮೂವತ್ತು. ಒಳ್ಳೆಯ ದೃಢಕಾಯನು. ತುಂಬಿದ ದೇಹ. ಅವನ ಹೆಂಡತಿಯಾದ ಲಕ್ಷ್ಮಿಯೋ, ಆ ಗ್ರಾಮದಲ್ಲಿ ಎಲ್ಲರಿಗಿಂತಲೂ ಚೆಲುವೆ. ಬಹು ಚುರುಕು. ಬಡ ಮನೆತನದವಳಾದರೇನು? ರಾಜಕನ್ಯೆಯಂತಿದ್ದಳವಳು. ಎಷ್ಟು ಆತಂಕಗಳೊದಗಿದರೂ, ಬೇಜಾರುಪಡದೆ ತನ್ನ ಕೆಲಸವನ್ನು ಮಾಡಿಬಿಡುವಳು. ಈ ಹೊಸ ಗುಡಿಸಲಲ್ಲಿ, ಲಕ್ಷ್ಮೀ

ಬೆಳೆವವಳಂತೆ ಕೆಲಸಮಾಡಿ ಕರಿಯನನ್ನು ಮುಗುಳ್ನಗೆಯಿಂದ ನೋಡುವಳು. ಆಗ ಅವನಿಗಂತೂ ಅವಳೇ ಪ್ರಪಂಚ! ಅವಳ ಮೇಲಿನ ಪ್ರೀತಿಯು ಮಿತಿ ಮೀರಿ ಹೋಗಿತ್ತು.

ಲಕ್ಷ್ಮಿಯು ತನ್ನ ತವರು ಮನೆಯಿಂದ ಸ್ವಲ್ಪ ಹಣವನ್ನು ತಂದಿದ್ದಳು. ಅದರಿಂದ ಹಾಲು ಕರೆಯುವ ಎಮ್ಮೆಯನ್ನು ಕೊಂಡಿದ್ದರು. ಕಾಲ ಕಾಲಕ್ಕೆ ಮಳೆ ಬೀಳುತ್ತಿತ್ತು. ಕರಿಯನು ಕಷ್ಟಪಟ್ಟು ಕೆಲಸಮಾಡಿ ಚೆನ್ನಾಗಿ ಬೆಳೆ ಬೆಳೆಯುತ್ತಿದ್ದನು. ಲಕ್ಷ್ಮಿಯು ಬೇಸರಪಡದೆ ಹಗಲಿರುಳೂ ಕೆಲಸ ಮಾಡು ವಳು. ಕರಿಯೆತ್ತುಗಳು, ಗದ್ದೆ, ಎಮ್ಮೆ— ಇವೇ ಅವರ ಭಾಗ್ಯ:

ಬಿಡುವಾದಾಗ ತವರು ಮನೆಯಿಂದ ತಂದಿದ್ದ 'ರಾಟೆ'ಯಿಂದ ಲಕ್ಷ್ಮಿ ನೂಲು ತೆಗೆಯುವಳು. ಬೆಳದಿಂಗಳಲ್ಲಿ ಇಬ್ಬರೂ ಸೇರಿ ನೂಲನ್ನು ತೆಗೆ ಯುತ್ತ ಸಂತೋಷದಿಂದ ಕಾಲ ಕಳೆಯುವರು.

ಲಕ್ಷ್ಮಿಯ ಎಮ್ಮೆಯು ಒಳ್ಳೆಯ ಜಾತಿಯದು. ಬೆಳಗಾದ ಕೂಡಲೇ ಹಾಲನ್ನು ಕರೆಯುವಳು. ಮೊಸರು ಕಡೆದು ಮನೆಯನ್ನು ಚೊಕ್ಕಟ ಮಾ ಡುವಳು. ಅನಂತರ ಆ ಮೊಸರನ್ನು ಗೌಡರ ಮನೆಗೆ ತೆಗೆದುಕೊಂಡು ಹೋಗಿ ಮಾರಿಬರುವಳು. ಸಂತೆಯ ದಿನ ತುಪ್ಪವನ್ನು ಕಾಯಿಸಿ ಮಾರು ವಳು. ಇವರಿಂದ ಅವಳಿಗೆ ಎರಡು ಮೂರು ರೂಪಾಯಿಗಳು ಬರುತ್ತಿದ್ದವು.

ಮುಂದಿನ ವರ್ಷ ಕರಿಯನಿಗೆ ಒಂದು ದೊಡ್ಡ ಯೋಚನೆ ಬಂದಿತು. ಲಕ್ಷ್ಮಿಯನ್ನು ಕುರಿತು 'ನಮ್ಮ ಗದ್ದೆ ಸಣ್ಣದು; ನಮ್ಮಿಬ್ಬರಿಗೂ ಯಾವಾ ಗಲೂ ಕೆಲಸವಿರುವುದಿಲ್ಲ. ಒಂದು ಗಾಡಿಯನ್ನು ಕೊಂಡು ಅದರಿಂದ ಎರಡು ಕಾಸನ್ನೇಕೆ ಸಂಪಾದಿಸಕೂಡದು? ಆಗ ಎತ್ತುಗಳಿಗೆ ವರ್ಷವೆಲ್ಲ ಕೆಲಸವಿರುವುದು. ನಮ್ಮ ದೊಡ್ಡಪ್ಪನ ಮಗ ಲಿಂಗನ್ನು ನೋಡು. ಗಾಡಿ ಯನ್ನು ಹೊಡೆದು ವಾರಕ್ಕೆ ಎರಡು ಮೂರು ರೂಪಾಯಿಗಳಿಗೆ ಕಮ್ಮಿಯಿಲ್ಲದೆ ಸಂಪಾದಿಸುತ್ತಾನೆ. ಒಂದೊಂದು ಸಲ ನಾಲ್ಕು ರೂಪಾಯಿಗಳೂ ಬರುವು ದುಂಟು. ನೀನು ತುಪ್ಪ ಮಾರಿ ಬಂದ ಹಣದ ಜೊತೆಗೆ ಮತ್ತಿಷ್ಟು ಸೇರಿಸಿ ಒಂದು ಗಾಡಿಯನ್ನೇಕೆ ಕೊಳ್ಳಬಾರದು? ಚೆನ್ನನು ತನ್ನ ಜವಾನು, ಬಂಡಿಯನ್ನು ಮಾರಿ ಶ್ರೀರಂಗಪಟ್ಟಣಕ್ಕೆ ಹೋಗುವನಂತೆ. ಅದನ್ನು ಸುಲಭ ಬೆಲೆಗೆ ನಾವೇಕೆ ಕೊಳ್ಳಬಾರದು?' ಹೀಗೆಂದನು.

ಲಕ್ಷ್ಮಿಯು ಅದಕ್ಕೆ "ಬೇಡ ಬೇಡ! ಚೆನ್ನನ ಗಾಡಿ ಬೇಡ. ಆ ಗಾಡಿಯು ಆಗಿಬರದು. ದುರದೃಷ್ಟವು ಅದರ ಹಿಂದೆ ಬರುವುದು. ಅಲ್ಲದೆ ಸಾಲ ಮಾಡಿಯಾದರೂ ಆ ಗಾಡಿಯನ್ನೇಕೆ ಕೊಳ್ಳಬೇಕು? ನಮಗೇನು ಈಗ ಕಷ್ಟ?" ಎಂದಳು.

ಕರಿಯನು 'ಹುಚ್ಚು ಮಾತಾಡಬೇಡ. ಹುಡುಗೀ! ಚೆನ್ನನು ಕುಡುಕನಾದರೆ ಗಾಡಿಯದೇನು ತಪ್ಪು? ಗಾಡಿಯು ಗಟ್ಟಿಯಾಗಿದೆ. ಇಪ್ಪತ್ತು ರೂಪಾಯಿಗಳ ಸಾಲವು ನಮಗೆ ಹೆಚ್ಚೆ? ನಾವು ಅದನ್ನು ತೀರಿಸಲಾರೆವೆ?' ಎಂದನು

"ನನ್ನ ಹಣದಿಂದ ಬೆಂಡೋಲೆ ಮಾಡಿಸಬೇಕೆಂದಿದ್ದೆ" ಎಂದು ಲಕ್ಷ್ಮಿ ಹೇಳಿದಳು.

"ಇದಕ್ಕೇನೋ ನೀನು ಬೇಡ ಎಂದಿದ್ದು? ನೀನು ಈಗಲೇ ಚೆಲುವೆ! ಚಲುವೆಗೆ ಏಕೆ ಬೆಂಡೋಲೆ? ಹೇಳು" ಎಂದನು ಕರಿಯ.

ಕರಿಯನು ಹೇಳಿದುದು ನಿಜವಾದ ಮಾತು. ಒಡವೆಗಳಿಂದ ಹೆಂಗಸರ ಸೌಂದರ್ಯ ಹೆಚ್ಚದು. ನವಿಲಿಗೇಕೆ ಅಲಂಕಾರ? ಹೀಗೆ ಒಡವೆಗಳಿಂದ ಅಲಂಕಾರ ಮಾಡಿಕೊಳ್ಳುವುದು 'ಅಲಂಕಾರಮಾಡಿದ ದೇವರ' ಹಾಗೆ ಕಾಣುವುದೇ ಹೊರತು ಮತ್ತೇನೂ ಇಲ್ಲ.

'ಹೆಂಗಸರೇನಾದರೂ ಬೇಕೆಂದರೆ ನೀವು ಎಲ್ಲಿಯೂ ಇಲ್ಲದ ನೆಪಗಳನ್ನು ಎತ್ತುವಿರಿ ಬಳೆ ತೊಡುವ ಹೆಂಗಸರಿಗೇನು ಗೊತ್ತು? ಮಾವನವರು ಏನು ಹೇಳುತ್ತಾರೋ ಅದನ್ನು ಕೇಳಿ. ನನ್ನನ್ನು ಏಕೆ ಕೇಳುತ್ತೀರಿ' ಎಂದಳು ಲಕ್ಷ್ಮಿ

ಕರಿಯನಿಗೆ ಆ ಗಾಡಿಯನ್ನು ಕೊಳ್ಳಬೇಕೆಂಬ ಆಸೆ ಬಹಳ ಇದ್ದಿತು. ಆದುದರಿಂದ ಅವನ ತಂದೆಯು ಅದಕ್ಕೆ ಪ್ರತಿ ಮಾತಾಡಲಿಲ್ಲ. ಒಂದು ವಾರವಾಯಿತು. ಜಮೀನ್ದಾರನಿಂದ ನಲವತ್ತು ರೂಪಾಯಿಗಳನ್ನು ಸಾಲವಾಗಿ ತಂದು ಅದರೊಂದಿಗೆ ಕೈಯಲ್ಲಿದ್ದ ಹಣವನ್ನು ಸೇರಿಸಿ ಆ ಗಾಡಿಯನ್ನು ಕೊಂಡುಕೊಂಡನು.

## ೨—ಹೆಂಡ

ಸುರಿಯ ಹಿರಿದುಂಡವಗೆ, ಉರಿಯ ಮೇಲ್ದುಡುಕು [ವಗೆ| ಹರಿಯುವ
ಹಾವ ಪರನಾರಿ ಪಿಡಿದಂಗೆ| ಮರಣ ಕಾಣಯ್ಯ! ಸರ್ವಜ್ಞ|

ಕರಿಯನು ಆಗಾಗ್ಗ ಬಾಡಿಗೆಗಾಗಿ ಗಾಡಿ ಹೊಡೆದುಕೊಂಡು ಹೋಗುವನು. ಬಹಳ ದೂರ ಹೋದಾಗ ಒಂದು ರಾತ್ರಿ ಒಂದು ಹಗಲು ಪೂರ್ತಿ, ಒಂದೊಂದು ವೇಳೆ ಅದಕ್ಕೂ ಹೆಚ್ಚಾಗಿ ನಿಂತು ವಾಪಸು ಬರುವನು. ಅವನ ದೊಡ್ಡಪ್ಪನ ಮಗನಾದ ರಾಮನು ಕರಿಯನ ಜೊತೆಗೆ ಗಾಡಿಯನ್ನು ಹೊಡೆದುಕೊಂಡು ಹೋಗುತ್ತಿದ್ದನು. ಒಂದು ವರ್ಷದೊಳಗಾಗಿ ಕರಿಯನಿಗೆ ರಾಮನು ಹೆಂಡ ಕುಡಿಯುವ ಅಭ್ಯಾಸ ಮಾಡಿಸಿಬಿಟ್ಟನು. ಆಮೇಲೆ ಯಾವಾಗಲಾದರು ಗಾಡಿಯನ್ನು ಹೊಡೆದುಕೊಂಡು ಹೋದರೆ, ಕರಿಯನು ಹೆಂಡದಂಗಡಿಗೆ ಹೋಗದೆ ಬರುತ್ತಿರಲಿಲ್ಲ. ಗಾಡಿಯಿಂದ ಸಂಪಾದಿಸುತ್ತಿದ್ದ ಹಣವು ದಿನ ದಿನಕ್ಕೆ ಕಮ್ಮಿಯಾಗುತ್ತ ಬಂದಿತು. ಎತ್ತುಗಳಿಗೂ ಒಳ್ಳೆಯ ಮೇವು ಸಿಗುವುದು ಕಷ್ಟವಾಯಿತು. ಒಂದು ದಿನ ಕರಿಯನು ಹೊತ್ತು ಮೀರಿ ಮನೆಗೆ ಹೋದನು. ಆಗ ಅವನ ಸ್ಥಿತಿಯನ್ನು ನೋಡಿ ಲಕ್ಷ್ಮಿಯು ಬೆಚ್ಚಿಬಿದ್ದಳು. ಅದುವರಿಗೂ ಆವಳಿಗೆ ನಿಜವಾದ ಗುಟ್ಟು ತಿಳಿದಿರಲಿಲ್ಲ. 'ಅಯ್ಯೋ ಮನೆಯನ್ನು ಹಾಳುಮಾಡಿದಿರಲ್ಲಾ!' ಎಂದು ಅರಚಿದಳು.

'ಬಾಯಿ ಮುಚ್ಚು, ನಿನ್ನ ಹಣವನ್ನು ಯಾರು ಕದ್ದರು?' ಎಂದನು ಕರಿಯ.

ಲಕ್ಷ್ಮಿಗೆ ಕೋಪವು ಉಕ್ಕಿತು. 'ನೀವು ಹೆಂಡವನ್ನು ಕುಡಿದು ಬಂದಿದ್ದೀರಿ!' ಎಂದಳು.

'ಹೌದು! ಹಾಗೆಯೇ. ನಿಮ್ಮಪ್ಪನ ಮನೆಯ ಹಣವೇನು? ನನ್ನನ್ನು ಕೇಳುವುದಕ್ಕೆ ನೀನು ಯಾರು?' ಎಂದು ಕರಿಯನು ಬಿರುಸಾಗಿ ಮಾತಾಡಿದನು.

'ಮನೆಯೊಳಗೆ ಕಾಲಿಡಬೇಡಿ! ನಿಮ್ಮವರ ಮನೆಗೆ ಹೋಗಿ. ನಾನು ನಿಮಗೆ ಈವತ್ತು ಅಡಿಗೆ ಮಾಡಲಿಲ್ಲ' ಎಂದಳು ಲಕ್ಷ್ಮಿ.

ಈ ವಿಷಯದಿಂದ ಅವಳ ಮುಖವು ಬಾಡಿತು.

'ನಿನ್ನ ಮುಖ ನೋಡು! ನಿನ್ನ ಹೊಲಸು ಅನ್ನವಿಲ್ಲದಿದ್ದರೆ ನಾನು ಸತ್ತುಹೋಗುವೆನೆ?' ಎಂದು ಹೇಳಿ ಕರಿಯನು ಅವಳನ್ನು ಹೊಡೆಯಲಿಕ್ಕೆ ಹೋದನು.

ಆಗಾಗ್ಗೆ ಇದೇ ರೀತಿ ಕಲಹಗಳು ಆಗುತ್ತಿದ್ದುವು. ಕೆಲವು ವೇಳೆ ಕರಿಯನು ಲಕ್ಷ್ಮಿಯನ್ನು ಚೆನ್ನಾಗಿ ಹೊಡೆದುಬಿಡುವನು. ಲಕ್ಷ್ಮಿಯು ಮಗುವನ್ನೆತ್ತಿಕೊಂಡು (ಈ ವೇಳೆಗೆ ಅವಳಿಗೆ ಒಂದು ಮಗುವಾಗಿತ್ತು) ತನ್ನ ಗೆಳತಿಯರ ಮನೆಗೆ ಹೋಗುವಳು.

ಅಲ್ಲಿ ಎಲ್ಲರೂ ಸೇರಿ ಯೋಚನೆ ಮಾಡುವರು. ಆದರೆ ದಿನದಿನಕ್ಕೆ ಸ್ಥಿತಿಗತಿಗಳು ಕೆಡುತ್ತ ಬಂದವು. ಆ ಎತ್ತುಗಳು ಮುದಿಯಾಗಿ ಭಾರವನ್ನೆಳೆಯಲು ಅಶಕ್ತವಾದುವು. ಸಂತೆಯಲ್ಲಿ ಅವುಗಳನ್ನು ಕರಿಯನು ಮಾರಿದನು. ಬಹಳ ನಷ್ಟವಾಯಿತು. ಹೊಸ ಜೊತೆಯ ಎತ್ತನ್ನು ತರಲು ಕೈಯಲ್ಲಿ ಕಾಸಿರಲಿಲ್ಲ. ಇನ್ನು ಮುಂದ ಹೆಂಡದಂಗಡಿಗೆ ಹೋಗುವುದಿಲ್ಲವೆಂದು ಲಕ್ಷ್ಮಿಯ ಮುಂದೆ ಆಣೆಯಿಟ್ಟನು. ತಿಳಿಯದ ಲಕ್ಷ್ಮಿಯು ಇದನ್ನು ನಂಬಿ, ತಾನು ಸೇರಿಸಿದ್ದ ಹಾಲುಮೊಸರಿನ ಹಣವನ್ನು ಕರಿಯನಿಗೆ ಕೊಟ್ಟಳು. ವಿಧವೆಯಾದ ಅಕ್ಕನಿಂದಲೂ ಕರಿಯನಿಗೆ ಹಣದ ಸಹಾಯವಾಯಿತು. ಈ ಹಣದಿಂದ ಒಂದು ಜೊತೆ ಹೊಸ ಎತ್ತನ್ನು ಕೊಂಡನು.

ಮೂರು ತಿಂಗಳುಗಳು ಕಳೆದುವು. ಜಮೀನ್ದಾರರು ತಮಗೆ ಸಲ್ಲಬೇಕಾದ ಹಣಕ್ಕೆ ಆಳನ್ನು ಕಳುಹಿಸಿದರು. ವಾಯಿದೆಯನ್ನು ಕೊಡಬೇಕೆಂದು ಕರಿಯನು ಅಂಗಲಾಚಿ ಬೇಡಿದನು. ಒಂದು ಸಲ, ಎರಡು ಸಲ, ಮೂರು ಸಲ ಜಮೀನ್ದಾರರು ವಾಯಿದೆಯನ್ನು ಕೊಟ್ಟರು. ನಾಲ್ಕನೆಯ ಸಲ ಆಳುಗಳು ಬಂದು ಇವನ ಎತ್ತೊಂದನ್ನು ಹಿಡಿದುಕೊಂಡು ಹೋದರು.

ಕರಿಯನು ಜಮೀನ್ದಾರರ ಬಳಿಗೆ ಓಡಿದನು. ಒಂದು ತಿಂಗಳ ಅವಧಿಯು ಬೇಕೆಂದು ಅವರ ಕಾಲಿಗೆ ಬಿದ್ದು ಬೇಡಿಕೊಂಡನು.

'ಒಂದು ದಿನವನ್ನೂ ಕೊಡಲಾರೆ. ಹೆಂಡಕುಡುಕಾ! ತೆಗೆದುಕೊಂಡ ಸಾಲವನ್ನು ತೀರಿಸದೆ ಹೊಸ ಜೊತೆ ಎತ್ತನ್ನು ಕೊಳ್ಳೆಂದು ಯಾರು ಹೇಳಿದರು? ಬುದ್ಧಿಯಿರಲಿಲ್ಲವೇ ಆವಾಗ?' ಎಂದರು ಜಮೀನ್ದಾರರು.

'ಹಾಗೆ ಹೇಳಬಾರದು. ಯಜಮಾನರು ನಮ್ಮನ್ನು ತಂದೆಯಂತೆ

ಕಾದುಕೊಂಡು ಬಂದಿರುವಿರಿ, ಒಂದೇ ಒಂದು ವಾಯಿದೆಯನ್ನು ಕೊಡಿ. ಖಂಡಿತವಾಗಿ ಹಣವನ್ನು ತೀರಿಸಿ ಬಿಡುತ್ತೇನೆ. ಬಡವರ ಹೊಟ್ಟೆ ಮೇಲೆ ಹೊಡೀಬಾರದು ಬುದ್ಧಿ' ಎಂದನು ಕರಿಯ.

'ಅದೆಲ್ಲಾ ಬರೀ ಮಾತು. ಒಂದು ನಿಮಿಷವೂ ಕೊಡಲಾರೆ: ಬುಧವಾರದ ಸಂತೆಗೆ ನಿನ್ನ ಎತ್ತುಗಳನ್ನೂ ಕಳುಹಿಸುತ್ತೇನೆ' ಎಂದರು ಜಮೀನ್ದಾರರು.

'ಅಯ್ಯೋ ಸ್ವಾಮಿ! ಹಾಗೆ ಮಾಡಿದರೆ ನನ್ನ ಸಂಸಾರ ಹಾಳಾಗುವುದು ಬುದ್ಧಿ. ಬೇಡಾ ಸ್ವಾಮೀ' ಎಂದು ಹೇಳುತ್ತ ಕರಿಯನು ತನ್ನ ಎತ್ತಿನ ಬಳಿಗೆ ಹೋದನು.

'ಓಡಿಸಿ ಹೊರಕ್ಕೆ! ಎತ್ತನ್ನು ಬಿಡಬೇಡಿ. ಹೋಗಿ ಹಣವನ್ನು ತೆಗೆದು ಕೊಂಡು ಬಾ. ಇಲ್ಲದಿದ್ದರೆ ಎತ್ತನ್ನು ಖಂಡಿತವಾಗಿ ಬುಧವಾರದ ಸಂತೆಯಲ್ಲಿ ಮಾರಿಬಿಡುತ್ತೇವೆ' ಎಂದರು ಜಮೀನ್ದಾರರು.

'ಬೇಡಾ ಸ್ವಾಮೀ! ನಾನಂತಹ ಭಿಕಾರಿಯಲ್ಲ. ಸ್ವಲ್ಪ ಅವಧಿಯನ್ನು ಕೊಡಿ. ನಿಮ್ಮ ಹಣವು ಎಲ್ಲಿಯೂ ಹೋಗದು' ಎಂದು ಕರಿಯನು ಪೇಚಾಡಿದನು.

'ಆಗದೇ ಆಗದು. ಖಂಡಿತ' ಎಂದು ಹಠ ಹಿಡಿದು ಮಾತಾಡಿದರು. ಜಮೀನ್ದಾರರು.

'ಬಡ್ಡಿಯನ್ನು ಸಲ್ಲಿಸುತ್ತೇನೆ, ತೆಗೆದುಕೊಳ್ಳಿ' ಎಂದನು ಕರಿಯ.

'ಜೋಡಿಸಿಂದ ಹೊಡಿ ! ನಾಯಿ ! ಬಡ್ಡಿಯಂತೆ ಬಡ್ಡಿ ! ಇವನು ನನಗೆ ಬಡ್ಡಿ ಕೊಡುತ್ತಾನಂತೆ ! ಕಂತು ಸಾಲ ಕೊಡುವ ತುರುಕನ ಹತ್ತಿರ ಹೋಗಿ ಹಣವನ್ನು ತೆಗೆದುಕೊಂಡು ಬಂದು ಸಲ್ಲಿಸಿ ಎರಡನೆಯ ಕೆಲಸ ಮಾಡು. ನಾಳೆಯ ದಿನ ಹಣ ಬಾರದಿದ್ದರೆ ಬಂದ ಬೆಲೆಗೆ ನಿನ್ನ ಎತ್ತನ್ನು ಮಾರಲು ಕಳುಹಿಸುವೆನು' ಎಂದು ಹೇಳಿ ಜಮೀನ್ದಾರರು ಒಳಕ್ಕೆ ಹೊರಟು ಹೋದರು.

'ಬೇರೆ ದಾರಿಯಿಲ್ಲಪ್ಪಾ ಕರಿಯಾ ! ಖಾದರ್ ಸಾಹೇಬರ ಬಳಿಗೆ ಹೋಗಿಯೇ ತೀರಬೇಕು. ಅವನಿಂದಲೇ ನಿನಗೆ ಏನಾದರೂ ಸಿಕ್ಕಬೇಕಾದರೆ' ಎಂದು ಜಮೀನ್ದಾರರ ಗುಮಾಸ್ತನು ಹೇಳಿದನು.

## ೩—ಸಾಲ

ಕರಿಯನು ತನ್ನ ತಂದೆಯ ಬಳಿಗೆ ಹೋಗಿ, ಅಣ್ಣನ ಹತ್ತಿರ ಸಾಲ ತೆಗೆಸಿ ಕೊಡಬೇಕೆಂದು ತೊಂದರೆ ಮಾಡಿದನು. ಅಣ್ಣನೂ ಮುದುಕನು ಹೇಳಿದಂತೆ ಸಹಾಯಮಾಡಬೇಕೆಂದು ಇಷ್ಟಪಟ್ಟನು. ಆದರೆ ಅವನ ಹೆಂಡತಿಯು ಅದಕ್ಕೊಪ್ಪಲಿಲ್ಲ.

'ಅವನಿಗೆ ನೀನು ಹಣವನ್ನು ಕೊಟ್ಟರೆ ಹಿಂತಿರುಗಿ ಬರುವುದಿಲ್ಲ. ಹಂತು ಸಾಲ ಕೊಡುವ ಸಾಹೇಬರ ಬಳಿ ಹೋಗಿ ತೆಗೆದುಕೊಳ್ಳಲಿ. ನಮ್ಮ ಹೊಟ್ಟೆಯು ಪಾಡೇ ಕಷ್ಟ ಈ ವರ್ಷ ಮಳೆ ಬೀರಿ ಹೊಯ್ಯುವುದೋ ಇಲ್ಲವೋ? ಬರುವ ವರ್ಷ ಈ ಕಾಲದಲ್ಲಿ ಹುಟ್ಟಿಲ್ಲದಿದ್ದರೆ ನಮಗೆ ರಾಗಿ ಯಾರು ಕೊಡುವರು?' ಎಂದು ಅವಳು ಗಂಡನಿಗೆ ಬುದ್ಧಿ ಹೇಳಿದಳು.

ಕೊನೆಗೆ ಕರಿಯನು ಖಾದರ್‌ಖಾನನ ಬಳಿಗೆ ಹೋದನು. ಆ ಊರಲ್ಲಿ ಜಮೀನ್ದಾರರು ಮೊದಲುಗೊಂಡು ಎಲ್ಲರ ಜಮಾಖರ್ಚಿನ ಲೆಕ್ಕಗಳೂ ಖಾದರ್‌ಖಾನನಿಗೆ ಗೊತ್ತು.

'ನಿನಗೆ ತಿಳಿಯದಪ್ಪಾ! ಜಮೀನ್ದಾರರಿಗೂ ಈಗ ತೊಂದರೆ ಹೆಚ್ಚು- ಅವರೂ ಕೂಡ ನನ್ನನ್ನು ಹಣ ಕೇಳಿದ್ದಾರೆ' ಎಂದನು ಖಾದರ್‌ಖಾನನು.

ಕರಿಯ: 'ದೊಡ್ಡಮನುಷ್ಯರ ತೊಂದರೆಗಳು ಹೇಗಾದರೂ ತೀರುವುವು. ನನ್ನ ಎತ್ತು ಹೋದರೆ ನನ್ನ ಬಾಳು ಅಲ್ಲಿಗೇ ಆಯಿತು. ಈ ಸಮಯದಲ್ಲಿ ನೀವೇ ನನಗೆ ಸಹಾಯ ಮಾಡಬೇಕು. ನೀವೇ ನನ್ನ ಪಾಲಿಗೆ ದೇವರು!'

ಖಾದರ್‌ಖಾನ್: 'ಅದು ಹೇಗೆ ಆಗುವುದಯ್ಯಾ? ಕೈಯಲ್ಲಿರುವ ಹಣವೆಲ್ಲವನ್ನೂ ಜಮೀನ್ದಾರರಿಗೆ ಕೊಡುತ್ತೇನೆಂದು ಹೇಳಿದ್ದೇನೆ.'

ಕರಿಯ: 'ಹಾಗೆ ಹೇಳಬೇಡಿರಿ ಬುದ್ಧಿ! ನನ್ನ ಗತಿಯೇನು? ಬಡವರಿಗೆ ಸಹಾಯ ಮಾಡಬೇಡವೆ ನಿಮ್ಮಂಥವರು? ಜಮೀನ್ದಾರರ ಮಾತು ನನಗೇಕೆ?'

ಖಾದರ್‌ಖಾನ್: 'ನಿಜ! ಬಡವರಿಗೆ ಸಹಾಯ ಮಾಡಬೇಕಾದ್ದೇ. ಆದರೆ ಅವರಿಗೆ ಮಾತು ಕೊಟ್ಟಿದ್ದೇನಲ್ಲಾ, ಅದೇ ಯೋಚನೆ.'

ಈ ರೀತಿಯಾಗಿ ಬಹಳ ಹೊತ್ತು ಮಾತುಕಥೆಗಳು ನಡೆದವು. ಆಮೇಲೆ ಖಾದರ್‌ಖಾನನು ಸಮ್ಮತಿಸಿದನು. ಕರಿಯನು ನಲವತ್ತೈದು ರೂಪಾಯಿಗಳನ್ನು ಇಸುಕೊಂಡು ಅರವತ್ತು ರೂಪಾಯಿಗಳಿಗೆ ಪತ್ರವನ್ನು ಬರೆದು ಕೊಟ್ಟನು. ತಿಂಗಳಿಗೆ ಐದು ರೂಪಾಯಿಯಂತೆ ಹನ್ನೆರಡು ತಿಂಗಳಲ್ಲಿ ಸಾಲವನ್ನು ತೀರಿಸುವುದಾಗಿ ಒಪ್ಪಿಕೊಂಡನು. ಬಡ್ಡಿಯಿಲ್ಲ! ಯಾವ ತಿಂಗಳಲ್ಲಾದರೂ ಕಂತು ಕೊಡಲು ತಪ್ಪಿದರೆ ಒಂದು ರೂಪಾಯಿ ದಂಡ ಕೊಡಬೇಕು!

ಖಾದರ್‌ಖಾನ್: 'ಕರಿಯಾ! ನಿನ್ನನ್ನು ನಂಬಿ ಹಣ ಕೊಟ್ಟಿದ್ದೇನೆ. ಚೆನ್ನಾಗಿ ಕಷ್ಟಪಟ್ಟು ಕೆಲಸಮಾಡುತ್ತೀ, ಹಣಾನೂ ಸಂಪಾದಿಸುತ್ತೀ. ಬಿಡದೆ ಕಂತನ್ನು ಕೊಡುತ್ತಾ ಬಾ! ಕುಡಿಯುವುದನ್ನು ಬಿಡು. ನೀನು ಒಳ್ಳೆಯವನು. ಹೆಂಡತಿ ಮಗು ಇದ್ದಾರೆ. ಸಂಸಾರ ದೊಡ್ಡದಾಗಬಹುದು. ನೀನು ಕುಡಿದೆಯೋ ಸಂಪೂರ್ಣವಾಗಿ ನಾಶವಾಗುತ್ತೀಯ.'

ಹೀಗೆ ಖಾದರ್‌ಖಾನನು ಕರಿಯನಿಗೆ ಉಪದೇಶ ಮಾಡಿದನು.

ಕರಿಯ: 'ನಿಜ ಯಜಮಾನರೆ! ಆ ಶನಿಯನ್ನು ಇನ್ನು ಮುಟ್ಟುವುದಿಲ್ಲ. ನಾನು ಇದುವರೆಗೆ ಅನುಭವಿಸಿದ್ದು ಸಾಕು. ಸಮಯಕ್ಕೆ ನೀವು ಸಹಾಯ ಮಾಡಿದಿರಿ. ಈ ಉಪಕಾರವನ್ನು ನಾನೆಂದಿಗೂ ಮರೆಯಲಾರೆ.'

ಕರಿಯನು ಜಮೀನ್ದಾರರ ಸಾಲವನ್ನು ತೀರಿಸಿ ಎತ್ತನ್ನು ಹೊಡೆದುಕೊಂಡು ಬಂದನು. ಉಳಿದ ಹಣವನ್ನು ಲಕ್ಷ್ಮಿಗೆ ಕೊಟ್ಟು "ಲೇ! ಇಲ್ಲಿ ನೋಡು. ಇನ್ನು ಮುಂದೆ ಹೆಂಡ ಸಾರಾಯಿ ಮುಟ್ಟುವುದಿಲ್ಲ ಪ್ರಮಾಣ ಮಾಡುತ್ತೇನೆ. ನನಗೆ ಹಣವೇನೂ ಬೇಕಿಲ್ಲ ಅದನ್ನು ನೀನು ಏನು ಬೇಕಾದರೂ ಮಾಡು. ನಾನು ಸಂಪಾದಿಸುವುದೆಲ್ಲವನ್ನೂ ನಿನ್ನ ಹತ್ತಿರವೇ ಕೊಡುವೆನು" ಎಂದನು.

ಲಕ್ಷ್ಮಿಗೆ ಬಹಳ ಆನಂದವಾಯಿತು. ತನಗೆ ಒಳ್ಳೆಯ ಕಾಲ ಬಂದಿತೆಂದು ತಿಳಿದಳು. ದೇಹದಲ್ಲಿ ಒಂದು ನೂತನ ಶಕ್ತಿ ಬಂದಹಾಗಾಯಿತು. ಮೊದಲಿಗಿಂತಲೂ ಹೆಚ್ಚು ಉತ್ಸಾಹದಿಂದ ತನ್ನ ಕೆಲಸಗಳನ್ನು ಮಾಡತೊಡಗಿದಳು.

## ೪—ಕೂಲಿಯ ಕೆಲಸ

ಜಮೀನಿನಲ್ಲಿ ಈಗ ಕೆಲಸವಿಲ್ಲ. ಲಕ್ಷ್ಮಿಗೆ ಸುಮ್ಮನಿರುವುದು ಆಗದು. "ಯಾವುದಾದರೊಂದು ಕೆಲಸವನ್ನು ನೋಡಬೇಕು. ಗಂಡನು ಸಾಲಗಾರನಾದಮೇಲೆ ನಾನು ಸುಮ್ಮನೆ ಹೇಗಿರಲಿ?" ಎಂದು ಚಿಂತಿಸುತ್ತಿದ್ದಳು.

ಖಾದರ್ ಖಾನನು ತನ್ನ ಮನೆಗೆ ಸೇರಿದ ಹಾಗೆ ಇನ್ನೊಂದು ಹೊಸ ಮನೆಯನ್ನು ಕಟ್ಟುತ್ತಿದ್ದನು. ಅಲ್ಲಿ ಕೂಲಿಯ ಕೆಲಸವು ಬಹಳವಾಗಿ ನಡೆಯುತ್ತಿದ್ದಿತು. ನಾಲ್ಕೈದು ಹೆಣ್ಣು ಕೂಲಿಯವರೊಡನೆ ಲಕ್ಷ್ಮಿಯೂ ಒಬ್ಬಳಾದಳು.

ಅವಳು ಬೆಳಗಾಗುವುದಕ್ಕೆ ಮುಂಚೆಯೇ ಎದ್ದು ಮನೆಯನ್ನು ಗುಡಿಸಿ ಸಾರಿಸುವಳು. ಆಮೇಲೆ ಹಾಲುಕರೆದು ಮೊಸರು ಮಾಡುವಳು. ಮೊಸರು ಮಾಡಿದ ಮೇಲೆ ಅದನ್ನು ಊರೊಳಕ್ಕೆ ತೆಗೆದುಕೊಂಡು ಹೋಗಿ ಮಾರುವಳು. ವರ್ತನೆಯ ಮನೆಗಳಲ್ಲಿ ಸಾವಕಾಶ ಮಾಡದಂತೆ ತನ್ನನ್ನು ಬೇಗ ಕಳುಹಿಸಬೇಕೆಂದು ಯಜಮಾನರನ್ನು ಬೇಡುವಳು. ಅವರು ಹಾಗೆಯೇ ಮಾಡುವರು ಅನಂತರ ಮನೆಗೆ ಬಂದು ಗಂಜಿಯನ್ನು ಕುಡಿದು ಮಗುವಿಗೆ ಹಾಲು ಕೊಡುವಳು. ಆಮೇಲೆ ಮಗುವನ್ನು ಪಕ್ಕದ ಮನೆಯಲ್ಲಿ ಬಿಟ್ಟು ಕೂಲಿಯ ಕೆಲಸಕ್ಕೆ ಹೋಗುವಳು. ಮಧ್ಯಾಹ್ನ ಕೆಲಸ ಮುಗಿಸಿಕೊಂಡು ಅವಸರದಿಂದ ಮನೆಗೆ ಬಂದು ಆರಿದ ಗಂಜಿಯನ್ನೇ ಕುಡಿದು ಮಗುವಿಗೆ ಹಾಲು ಹಾಕಿ ಪುನಃ ಕೆಲಸಕ್ಕೆ ಓಡುವಳು. ಸಾಯಂಕಾಲವಾದಮೇಲೆ ಮೇಸ್ತ್ರಿಯು ಕೂಲಿಯವರನ್ನು ಕೆಲಸದಿಂದ ಬಿಡುವನು. ಕತ್ತಲಾದಮೇಲೆ ಲಕ್ಷ್ಮಿಯು ಮನೆಗೆ ಬಂದು ಅಡಿಗೆ ಮಾಡುವಳು. ಇಷ್ಟು ಕೆಲಸಗಳನ್ನು ಮಾಡಿದಾಗ್ಯೂ ಅವಳ ಉತ್ಸಾಹವು ಕುಂದಿರುತ್ತಿರಲಿಲ್ಲ. ಕೆಲಸವೇನೋ ಕಷ್ಟದಿಟ. ಆದರೆ ದಿನವೊಂದಕ್ಕೆ ಎರಡಾಣೆ ಕೂಲಿಯು ಬರುತ್ತಿತ್ತು. ಈ ಕಷ್ಟಕಾಲಗಳಲ್ಲಿ ದಿನ ಒಂದಕ್ಕೆ ಎರಡಾಣೆ ಸಿಗುವುದೇ ಹೆಚ್ಚು.

ತನ್ನ ಗಂಡನು ಇನ್ನು ಹೆಂಡವನ್ನು ಕುಡಿಯಲಾರನು, ಹೊಸ ಮನುಷ್ಯನಾಗಿದ್ದಾನೆ, ಎಂಬ ನಂಬಿಕೆಯೇ ಲಕ್ಷ್ಮಿಗೆ ಇಷ್ಟು ಉತ್ಸಾಹವನ್ನು ಕೊಟ್ಟಿದ್ದು. ಕರಿಯನೂ ಎರಡು ತಿಂಗಳ ಕಾಲ ಹೇಳಿದಂತೆ

ಕಾಲಿಡಲಿಲ್ಲ. ಎರಡು ತಿಂಗಳಾಯಿತು. ಪುನಃ ಕೆಟ್ಟ ಚಾಳಿಯನ್ನೇ ಹಿಡಿದನು. ಸಂಪಾದಿಸಿದ ಹಣವೆಲ್ಲವೂ ಯಾವ ದಾರಿಯಲ್ಲಿ ಹೋಗುವುದೋ ತಿಳಿಯದಾಯಿತು. ಲಕ್ಷ್ಮಿಯ ಹತ್ತಿರ ಒಂದು ಕಾಸೂ ಬಂದು ನಿಲ್ಲಲಿಲ್ಲ. ಎರಡು ಮೂರು ದಿನಗಳು ಮನೆಗೆ ಬಾರದೆಯೇ ಕಾಲವನ್ನು ಕಳೆದು ಎತ್ತಿಗೆ ಸ್ವಲ್ಪ ಮೇವನ್ನು ತಂದು ಕರಿಯನು ಮನೆಗೆ ಸೇರುವನು, ಮಿಗುವ ಹಣದ ಲೆಕ್ಕಕ್ಕೆ ಸುಳ್ಳುಪಳ್ಳು ಹೇಳುವನು.

ಕೆಲವು ದಿನಗಳಾದ ಮೇಲೆ ಹೀಗೆ ಸುಳ್ಳು ಹೇಳಿ ಮೋಸ ಮಾಡುವುದನ್ನೂ ಬಿಟ್ಟನು. ಲಕ್ಷ್ಮಿ ಕೇಳುವುದನ್ನೂ ಬಿಟ್ಟಳು. ಆದರೆ ಅವಳು ಮಾತ್ರ ಮನೆಯ ಕೆಲಸದಲ್ಲೂ ಕೂಲಿಯ ಕೆಲಸದಲ್ಲೂ ರಾತ್ರಿ ಹಗಲು ಶ್ರಮಪಡುತ್ತಿದ್ದಳು.

ಒಂದು ದಿನ ಖಾದರ್‌ಖಾನನು ಕರಿಯನ ಮನೆಗೆ ಬಂದು ಕಂತು ಕೊಡೆಂದು ಜಗಳವಾಡಿದನು. ಮಾತು ಹೆಚ್ಚಿತು. ಲಕ್ಷ್ಮಿಗೆ ಮೇಸ್ತ್ರಿಯ ಕೆಳಗೆ ಕೆಲಸ ಮಾಡಿ ಬಿರುಸು ಮಾತುಗಳ ಸ್ನೇಹವೇನೋ ಆಗಿದ್ದಿತು. ಆದರೆ ಅವಳು ಇದುವರೆಗೂ ಕೇಳಿ ಅರಿಯದ ಆಭಾಸವಾದ ಬೈಗಳನ್ನು ಈಹೊತ್ತೇ ಕೇಳಿದಳು. ಮನೆಯೊಳಗೆ ಹೋಗಿ ಕುಡಿಕೆಯಲ್ಲಿದ್ದ ಕಾಸುಗಳ ಗಂಟನ್ನು ತೆಗೆದುಕೊಂಡು ಬಂದು ಖಾದರನ ಮುಂದೆ ಚೆಲ್ಲಿದಳು. ಕರಿಯನು ಅಷ್ಟು ದಿನವೂ ಸೂರೆ ಹೊಡೆಯುತ್ತಿದ್ದರೂ ಕೂಡ, ಅವಳು ಅಷ್ಟು ಹಣವನ್ನು ಮಿಗಿಸಿಟ್ಟಿದ್ದಳು.

ಲಕ್ಷ್ಮಿಯು ಆ ದಿನವೆಲ್ಲ ಅಳುತ್ತಿದ್ದಳು. ಮರುದಿವಸ ಅವಳಿಗೆ ಮೈ ಸರಿಯಾಗಿರಲಿಲ್ಲ. ಹಾಗೆಯೇ ಕೆಲಸಕ್ಕೆ ಹೊರಟಳು. ಆ ಖಾದರನ ಅಗೌರಪವಾದ ಮಾತುಗಳು ಅವಳ ಹೃದಯದಲ್ಲೇ ಇದ್ದು ನೋವನ್ನುಂಟು ಮಾಡಿದವು. ಇದಕ್ಕಿಂತ ಮುಂಚೆ ತಿರುಗಾಡುವ ಹುಲ್ಲೆಯಂತೆ ಉತ್ಸಾಹವನ್ನು ಪಡೆದಿದ್ದ ಇವಳು ಈ ಹೊತ್ತು ಬೇರೆಯ ತೆರನಾದಳು.

ಅವಳೊಡನೆ ಕೆಲಸಮಾಡುತ್ತಿದ್ದ ಗಂಡಸರ ಬಿರುಸು ಧ್ವನಿಯನ್ನು ಕೇಳಿ ಈಗ ಅವಳು ಕಂಪಿಸಿದಳು. ಅವಳ ಭಯವು ಹೆಚ್ಚಿತು. ಅದರ ಜೊತೆಗೆ ದುಷ್ಟರ ಕಾಮದೃಷ್ಟಿಯ ಬೇಟೆಯ ಪ್ರತಾಪವೂ ಬೆರೆಯಿತು. ಖಾದರ್‌ಖಾನನ ಮಗನೇ ಮನೆಕಟ್ಟುವ ಕೆಲಸಕ್ಕೆ ಮೇಲ್ವಿಚಾರಕನಾಗಿದ್ದನು.

ಅವನ ಕಣ್ಣೂ ಮಾತೂ ಕೆಲವು ಸಮಯದಲ್ಲಿ ಅವಳನ್ನು ಬಹಳ ನಾಚು ವಂತೆ ಮಾಡಿದುವು.

ಲಕ್ಷ್ಮಿಯು ಕೂಲಿ ಕೆಲಸ ಮಾಡಲಾರಂಭಿಸಿದ ಮೇಲೆ ಮಗುವನ್ನು ಸರಿಯಾಗಿ ನೋಡಿಕೊಳ್ಳಲು ಅವಳಿಗೆ ಆಗಲಿಲ್ಲ. ಪಾಪ, ದಿನದಿನಕ್ಕೂ ಬಡವಾಗುತ್ತಿದ್ದ ಆ ಮಗುವಿಗೆ ಜ್ವರವೂ ಕೆಮ್ಮೂ ಬಂದಿತು. ಗ್ರಾಮಗಳಲ್ಲಿ ಔಷಧಿ ಸಿಗುವುದೇನು? ಒಂದೆರಡು ಬರೆಗಳನ್ನು ಹಾಕಿ ನೋಡಿದರು. ಒಂದು ವಾರ ನೋಡಲಾಗದಷ್ಟು ಯಾತನೆಯನ್ನನುಭವಿಸಿ, ಅದು ನಂತರ ಕಣ್ಣು ಮುಚ್ಚಿತು.

ಕರಿಯನು ಹೆಂಗಸಿನಂತೆ ಬಿಕ್ಕಿ ಬಿಕ್ಕಿ ಅತ್ತನು. 'ಅಳಬೇಡವಪ್ಪಾ! ದೇವರು ಕೊಟ್ಟನು. ಅವನೇ ಕಿತ್ತುಕೊಂಡನು. ನಾವೇನು ಮಾಡುವೆವು?' ಎಂದು ಅವನ ಮುದುಕ ತಂದೆಯು ಸಮಾಧಾನ ಹೇಳಿದನು.

'ಮಾವನವರೇ, ದೈವವು ನನಗೇಕೆ ಹೀಗೆ ಮಾಡುವುದು ? ನಾನು ಯಾರಿಗೂ ಒಂದು ಕೆಟ್ಟದನ್ನು ಬಯಸಿಲ್ಲಾ !' ಎಂದು ಲಕ್ಷ್ಮಿಯು ಪ್ರಲಾಪಿಸಿದಳು.

ಮುದುಕ: 'ಅಯ್ಯೋ ಭ್ರಾಂತೆ! ಅಳಬೇಡ, ನಿನಗೇನು ಅಷ್ಟು ವಯಸ್ಸಾಗಿರುವುದು ? ಇನ್ನೂ ಏಳೆಂಟು ಮಕ್ಕಳನ್ನು ಹೆರಲು ಕಾಲವಿದೆ. ಜಮೀನಿನಲ್ಲಿ ಬಿತ್ತಿದ ಬೀಜವೆಲ್ಲವೂ ಬೆಳೆಯುವುದೇನು ? ಅದಕ್ಕಾಗಿ ನಾವು ದುಃಖ ಪಡುವೆವೆ?'

ಲಕ್ಷ್ಮಿ: 'ಇನ್ನು ಮೇಲೆ ನನಗೆ ಮಕ್ಕಳಂತೂ ಬೇಡ. ಭೂಮಿಯಲ್ಲಿ ಎಲ್ಲಾ ಸುಖದುಃಖಗಳನ್ನು ಅಭವಿಸಿದೆನು. ದೇವರು ನನ್ನನ್ನು ಕರೆದುಕೊಂಡು ಹೋಗುವುದೊಂದೇ ಉಳಿದಿರುವುದು.'

ಮುದುಕನು ನಕ್ಕನು. 'ನಿನ್ನ ಗಂಡನಿಗೆ ಬುದ್ಧಿ ಹೇಳಿ, ಕೈಯಲ್ಲಿರುವ ಒಂದು ಕಾಸನ್ನೂ ಹೆಂಡದಂಗಡಿಯಲ್ಲಿ ಹಾಳಾಗದಹಾಗೆ ನೋಡಿಕೋ. ಈ ದುಃಖವನ್ನು ಮರೆತು ಮಕ್ಕಳನ್ನು ಹೆತ್ತು ಸುಖವಾಗಿರಬಾರದೇನಮ್ಮಾ ? ಅಣ್ಣಮ್ಮನು ನಿನ್ನ ಕೈಯನ್ನು ಬಿಡಲಾರಳು,' ಎಂದನು.

'ಆ ಹಾಳು ವಿಷವನ್ನು ಇನ್ನುಮೇಲೆ ನಾನು ಮುಟ್ಟುವುದಿಲ್ಲ. ಮುಟ್ಟಿ

ದರೆ ನಾಶವಾಗುವುದು ನಿಜ. ತನ್ನ ತಲೆಯ ಆಣೆ' ಎಂದು ಕರಿಯನು ಶಪಥ ಮಾಡಿದನು.

### ೫—ಮೋಸ

ಲಕ್ಷ್ಮಿಗೆ ಇನ್ನೂ ಒಳ್ಳೆಯ ಕಾಲ ಬರಲಿಲ್ಲ. ಅವಳ ಕಷ್ಟಗಳು ಇನ್ನೂ ಕೊನೆಗಾಣಲಿಲ್ಲ. ಕರಿಯನು ಮುಂದಿನ ಬುಧವಾರದ ದಿನ ರಾಮಾಪುರದ ಸಾರಾಯಿ ಅಂಗಡಿ ಬಳಿ ಹೋಗುತ್ತಿದ್ದಾಗ ತಾನು ಮಾಡಿದ ಶಪಥವನ್ನು ಮರೆತುಬಿಟ್ಟನು. ಮೈಸೂರಿಗೆ ಮೂಟೆಗಳನ್ನು ಹಾಕಿಕೊಂಡು ಹೋಗಿ ಇತರ ಗಾಡಿಯವರೊಡನೆ ಹಿಂತಿರುಗುತ್ತಿದ್ದನು. ಸಾರಾಯಿ ಅಂಗಡಿಯ ಬಾಗಿಲಿಗೆ ಬಂದಕೂಡಲೇ ಗಾಡಿಯನ್ನು ನಿಲ್ಲಿಸಿ 'ಲೇ! ಯಾರು ಕುಡಿಯೋ ದಕ್ಕೆ ಹೋಗೋನು? ನನಗೆ ಬೇಡವಪ್ಪಾ ಆ ಶನಿ! ನಾನು ಹೋಗುವು ದಿಲ್ಲ' ಎಂದನು.

'ಬೇಡವಾದರೆ ಕಾಸನ್ನು ಗಟ್ಟಿಯಾಗಿ ಗಂಟು ಹಾಕಿಕೊಂಡು ಹೋಗು, ಏಕೆ ಕೂಗುತ್ತೀಯ?' ಎಂದು ಹೇಳುತ್ತ ಗಾಡಿಯವರಲ್ಲೊಬ್ಬನು ಅಂಗಡಿ ಯೊಳಕ್ಕೆ ನುಗ್ಗಿದನು. ಕರಿಯನೂ ಸ್ವಲ್ಪ ನಿದಾನ ಮಾಡಿ, ಒಳಕ್ಕೆ ಹೋ ದನು. ಒಳಗೆ ಹೋಗುತ್ತ 'ಇದೇ ಕೊನೆಯ ಸಲ' ಎಂದು ಮನಸ್ಸಿನಲ್ಲಂದು ಕೊಂಡನು.

ಮುಂದಿನ ಸಂತೆಯ ದಿನವೂ ಹೀಗೆಯೇ ಆಯಿತು. 'ಏನೋ ಕೈ ಯಲ್ಲಿ ಕಾಸಿರುವಾಗ ಚಿಂತೆಯನ್ನು ಮರೆತು ಸಂತೋಷವಾಗಿರಬಾರದೇಕೆ?' ಎಂದು ತನ್ನ ಜೊತೆಗೆ ಬಂದವರೊಡನೆ ಕರಿಯನು ಹೇಳಿದನು.

'ಅದೇತಕ್ಕೆ ಬಿಡು. ಹಣವೇನು ಒಡಹುಟ್ಟಿದ್ದೇ? ನಾವು ಕಷ್ಟಪಟ್ಟು, ಸಂಪಾದಿಸುವ ಕಾಸನ್ನು ನಮ್ಮಿಷ್ಟದಂತೆ ಖರ್ಚುಮಾಡಲು ಯಾರದೇನಡ್ಡಿ?' ಎಂದು ಅವನ ಜೊತೆಗಾರನು ಹೇಳಿದನು. ಇದನ್ನು ಕೇಳುತ್ತಿದ್ದ ಮತ್ತೊ ಬ್ಬನು, 'ಸರಿಯಾಗಿದೆ ಮಾತು! ಈ ಲೋಕವು ಸ್ಥಿರವಲ್ಲ. ಎಲ್ಲಾ ಅಸತ್ಯ. ಈ ಹೊತ್ತಿರುವುದು ನಾಳೆಯಿರುವುದಿಲ್ಲ. ಸಾವಿರ ವರ್ಷ ಬದುಕುವೆವೇನು? ನಾವು ಕಣ್ಣು ಮುಚ್ಚಿದ ಮೇಲೆ ಈ ಹಣ ನನ್ನದೇ, ನಿನ್ನದೇ?' ಹೀಗೆಂದು ವೇದಾಂತ ಮಾತಾಡಿದನು.

'ಇಲ್ಲವೇ ಇಲ್ಲ! ನಿನ್ನದೂ ಅಲ್ಲ ನನ್ನದೂ ಅಲ್ಲ. ಎಲ್ಲಾ ಈ ಸಾರಾಯಿ ಅಂಗಡಿಯವನದು' ಎಂದು ನಾಲ್ಕನೆಯವನು ಹೇಳಿದನು.

ಇದನ್ನು ಕೇಳಿ ಎಲ್ಲರೂ ಗಟ್ಟಿಯಾಗಿ ನಕ್ಕರು.

'ಎಲೆ ಹೋಗರೋ ಮುಠ್ಠಾಳರಾ! ಎಲ್ಲರೂ ಬಹಳ ಓದಿದವರಂತೆ ಮಾತಾಡುತ್ತೀರಿ. ಈ ಸಾರಾಯಿ ಒಳಕ್ಕೆ ಹೋಗಬೇಕಾದರೆ ಎಷ್ಟು 'ಧಗ ಧಗ' ಎಂದು ಹೋಗುತ್ತೆ!' ಎಂದನು ಮತ್ತೊಬ್ಬನು.

'ಲೇ! ಈ ಮಂಡಿಯವರನ್ನೂ ಬೈಯಬೇಕೋ! ಈ ಕಳ್ಳ ಮಕ್ಕಳು ನಮ್ಮನ್ನು ಚೆನ್ನಾಗಿ ಮೋಸಪಡಿಸುತ್ತಾರೆ. ಬಾಡಿಗೆ ಎಲ್ಲವನ್ನೂ ಕಮ್ಮಿ ಮಾಡಿಬಿಟ್ಟರು.' ಎಂದನು ಕರಿಯ.

ಈ ರೀತಿಯಾಗಿ ಕತ್ತಲಾಗುವವರಿಗೂ ಮಾತಾಡಿ ಗಾಡಿಯ ಬಳಿಗೆ ಹೋಗುವರು. ಖಾದರ್‌ಖಾನನು ತನ್ನ ಕಂತಿನ ಸಾಲಕ್ಕೆ ವಸೂಲಿಗಾಗಿ ಬರುವ ದಿನವಾಯಿತು. ಅವನು ಬರುವುದರೊಳಗಾಗಿ ಹಣವನ್ನು ಕೊಟ್ಟು ಬಿಡುವಂತೆ ಲಕ್ಷ್ಮಿಯು ಕರಿಯನಿಗೆ ಹೇಳುತ್ತಿದ್ದಳು.

"ಅವನು ಕೆಟ್ಟ. ಆಸಾಮಿ ಬರಲಿ! ಏನಾದರೂ ಮಿತಿ ಮೀರಿ ಮಾತಾಡಿದರೆ ಬುರುಡೆಯನ್ನು ಹಾರಿಸಿ ಬಿಡುತ್ತೇನೆ." ಎಂದನು.

ಆದರೆ ಸಾಹೇಬನು (ಬೇರೆ ಹೆಚ್ಚಿನ ಕೆಲಸವಿತ್ತೋ ಏನೋ) ಬಹು ದಿನಗಳಾದರೂ ಬರಲೇ ಇಲ್ಲ ಕರಿಯನು ಅದನ್ನು ಮರೆತನು.

ಒಂದು ದಿನ ಬೆಳಿಗ್ಗೆ ಖಾದರ್‌ಖಾನನ ಮಗ ಇಸ್ಮೇಲನು ಬಂದನು. ಆದರೆ ಹಣವನ್ನು ಕೇಳುವುದಕ್ಕೆ ಬದಲಾಗಿ, ರಾಮಾಪುರಕ್ಕೆ ಮೆಣಸಿನಕಾಯಿ ಮೂಟೆಯನ್ನು ಹಾಕಿಕೊಂಡು ಹೋಗುವೆಯಾ ಎಂದು ಕರಿಯನನ್ನು ಕೇಳಿದನು.

'ರಾಮೇಗೌಡರಿಗೆ ಹುಲ್ಲು ಹೊರೆಯನ್ನು ತೆಗೆದುಕೊಂಡು ಹೋಗ ಬೇಕು ಒಂದು ವಾರಕ್ಕೆ ಮುಂಚೆಯೇ ಹೇಳಿದ್ದಾರೆ' ಎಂದನು ಕರಿಯ.

'ಅದೆಲ್ಲಾ ಆಗುವುದಿಲ್ಲ ಕರಿಯಾ! ರಾಮೇಗೌಡರ ಹುಲ್ಲಿಗೆ ಅವಸರ ವಿಲ್ಲ. ನಮ್ಮ ಮೂಟೆಗಳನ್ನು ಹಾಕಿಕೊಂಡು ಹೋಗಲೇಬೇಕು. ಇವತ್ತು ಮೂಟೆಗಳನ್ನು ಕಳುಹಿಸದಿದ್ದರೆ ನಮಗೆ ಒಳ್ಳೆಯ ಗಿರಾಕಿ ತಪ್ಪುವುದು.' ಎಂದನು ಇಸ್ಮೇಲ್.

ಕರಿಯನು ಕೊನೆಗೆ ಸಮ್ಮತಿಸಿದನು. ಸಾಹೇಬರು ಕಂತು ಹಣ ಕೇಳುವುದನ್ನು ಮರೆತಿರಬೇಕಾದರೆ ಅವರು ಹೇಳುವ ಮಾತನ್ನು ಕೇಳದೆ ಹೋದರಾದೀತೇ ?

ಸಾಯಂಕಾಲ ಲಕ್ಷ್ಮಿ ಒಬ್ಬಂಟಿಗಳಾಗಿ ಮನೆಯಲ್ಲಿ ಅಡಿಗೆ ಮಾಡುತ್ತಿರುವಾಗ ಇಸ್ಮೇಲ್‌ಖಾನನು ಮತ್ತೆ ಬಂದನು. ಮನೆಯ ಹೊರಗೆ ನಿಂತುಕೊಂಡು 'ಕರಿಯನು ಬಂದನೆ ?' ಎಂದು ಕೇಳಿದನು.

'ಇನ್ನೂ ಬಂದಿಲ್ಲ' ಎಂದಳು ಲಕ್ಷ್ಮಿ.

'ಹೌದು ! ಇಷ್ಟು ಬೇಗ ಬರುವನೆ ? ಬರುವ ದಾರಿಯಲ್ಲಿ ಸಾರಾಯಿ ಅಂಗಡಿಯಿರುವುದು,' ಎಂದು ಹೇಳುತ್ತ ಇಸ್ಮೇಲನು ಮನೆಯೊಳಕ್ಕೆ ಬಂದನು.

'ಹೌದು, ನನ್ನಂತಿರುವ ಬಡ ಹೆಣ್ಣು ಮಕ್ಕಳ ಹೊಟ್ಟೆಯುರಿಸುವುದಕ್ಕೆ ಬೇಕಲ್ಲವೇ ಈ ಸಾರಾಯಿ ಅಂಗಡಿಗಳು ?' ಎಂದಳು ಲಕ್ಷ್ಮಿ.

ಅವರ ಮಾತಾದಮೇಲೆ ಇಸ್ಮೇಲನು ಕುಳಿತುಕೊಂಡನು. ಕರಿಯನು ಬರುವವರಿಗೂ ಅವನು ಕಾದಿರುವನೆಂದು ತಿಳಿದು ಲಕ್ಷ್ಮಿಯು ತನ್ನ ಕೆಲಸಕ್ಕೆ ಹೋದಳು.

ಇಸ್ಮೇಲನು ಮಾತು ಬೆಳೆಸಿದನು. 'ಇರಲಿ! ನಿನ್ನ ಗಂಡನ ವಿಚಾರದಲ್ಲಿ ಹೇಸಿಕೆಯಾಗಲಿಲ್ಲವೆ ನಿನಗೆ ?' ಎಂದು ಕೇಳಿದನು.

'ಅಯ್ಯೋ, ಅದು ಹೇಗೆ? ಮದುವೆಯಾದ ಗಂಡನ ವಿಚಾರದಲ್ಲಿ ಒಳ್ಳೆಯದಾಗಲಿ ಕೆಟ್ಟದಾಗಲಿ ಅನುಭವಿಸಿಯೇ ತೀರಬೇಕು,' ಎಂದು ಲಕ್ಷ್ಮಿ ತಿರುಗಿ ನೋಡದೆ ಉತ್ತರಕೊಟ್ಟಳು.

'ನಿಜ! ಏನಿದ್ದರೂ ಗಂಡ, ಮದುವೆಯಾದ ಗಂಡನನ್ನು ಬಿಡುವುದಕ್ಕಾಗುವುದೆ ?' ಎಂದನು ಇಸ್ಮೇಲ್.

ಸ್ವಲ್ಪ ಹೊತ್ತಾದ ಮೇಲೆ, "ಪಾಪ ! ನಿನ್ನಂಥ ಲಕ್ಷಣವಾದ ಹುಡುಗಿ ಒಬ್ಬ ಕುಡುಕನನ್ನು ಮದುವೆಯಾಗಿ ಕಷ್ಟಪಡಬೇಕೆ ? ಏನು ದುರದೃಷ್ಟ !" ಎಂದು ಮೃದುಸ್ವರದಿಂದ ಹೇಳಿದನು.

ಲಕ್ಷ್ಮಿಯಿಂದ ಅದಕ್ಕೆ ಉತ್ತರ ಬರಲಿಲ್ಲ. ಆಮೇಲೆ ಇಸ್ಮೇಲನು ಅವಳ ಕಷ್ಟಗಳನ್ನು ಕುರಿತು ವಿಚಾರಿಸಿದನು. ಹೀಗೆ ಮಾತು ಬೆಳೆಯಿತು. ಸ್ವಲ್ಪ

ಹೊತ್ತಾದಮೇಲೆ, ಕರಿಯನು ಬರುವುದಕ್ಕೆ ಮುಂಚೆಯೇ ಇಸ್ಮೇಲನು ಹೊರಟುಹೋದನು.

ಮರುದಿನವೂ ಇಸ್ಮೇಲನು ಬಂದು ಕರಿಯನಿಗೆ ಏನೋ ಕೆಲಸವನ್ನು ಕೊಟ್ಟು ಕಳುಹಿಸಿದನು. ಆ ದಿನ ಸಾಯಂಕಾಲವೂ ಅವನು ಎಂದಿನಂತೆ ಕರಿಯನ ಮನೆಗೆ ಬಂದನು. ಬರುವಾಗ ಸ್ವಲ್ಪ ಕಲ್ಲುಸಕ್ಕರೆಯನ್ನು ತೆಗೆದುಕೊಂಡು ಬಂದು ಲಕ್ಷ್ಮಿಗೆ ಬಲಾತ್ಕಾರ ಮಾಡಿ ಕೊಟ್ಟನು. ಅದು ತನಗೆ ಸುಮ್ಮನೆ ಬಂತೆಂದೂ ಅದಕ್ಕೆ ಕಾಸು ಕೊಡಲಿಲ್ಲವೆಂದೂ ಹೇಳಿದನು.

"ನಿನ್ನನ್ನು ನೋಡಿದರೆ ನನಗೊಂದು ಬಗೆಯ ಉತ್ಸಾಹವುಂಟಾಗುತ್ತೆ" ಎಂದನು ಇಸ್ಮೇಲ್.

"ಇದೆಲ್ಲವೂ ಏತಕ್ಕೋ ನನಗೆ ತಿಳಿಯಲಿಲ್ಲ" ಎಂದುಕೊಂಡು ಲಕ್ಷ್ಮಿ ತನ್ನಲ್ಲಿಯೇ ಭಯಪಟ್ಟಳು.

"ನಾನು ಹತ್ತಿರಕ್ಕೆ ಬಂದರೆ ನೀನೇಕೆ ನಡುಗುವೆ? ಸಾಲದ ಹಣಕ್ಕಾಗಿ ನಿನಗೆ ತೊಂದರೆ ಕೊಡುವೆನೆಂದು ಭಯಪಡುವೆಯಾ? ನೀನು ಸ್ವಲ್ಪ ಸಂತೋಷವಾಗಿ ಮಾತಾಡಿದರೆ ನನಗೆ ಹಣವೇತರದು? ಹಣಕ್ಕೇನು? ಬೇಕಾದ ಹಾಗಿದೆ" ಎಂದನು ಇಸ್ಮೇಲ್.

ಈ ಕಥೆಯನ್ನು ಬೆಳೆಸಲೇಕೆ? ಲಕ್ಷ್ಮಿಯು ಬಹಳ ದಿನ ದೃಢವಾಗಿದ್ದಳು. ಬಲೆಯಲ್ಲಿ ಬೀಳದೆ ಇದ್ದವಳು ಕೊನೆಗೆ ಮೋಸಹೋದಳು. ಮಾನವಿಲ್ಲದ ದುಷ್ಟನ ದುರುದ್ದೇಶಕ್ಕೆ ಅಧೀನಳಾದಮೇಲೆ, ಅವನ ಸಂಕಲ್ಪವು ಕೈಗೂಡುವುದರಲ್ಲೇನು ಕಷ್ಟ? ಲಕ್ಷ್ಮಿ ತನ್ನ ಶೀಲವನ್ನು ಕಳೆದುಕೊಂಡಳು.

## ೬. ಕೋಪ

ನಂಜರಾಜಪುರದ ಹೆಂಡದಂಗಡಿಯೊಳಕ್ಕೆ ಹೋಗಬಾರದ ಜಾತಿಯವರಿಗೆ ಹೆಂಡವನ್ನು ಹಾಕಲು ಪ್ರತ್ಯೇಕವಾಗಿ ಹೊರಗೆ ಏರ್ಪಡಿಸಿದ್ದ ಸ್ಥಳದ ಸುತ್ತಲೂ ತಂಡತಂಡವಾಗಿ ಮಾದಿಗರೂ ಹೊಲೆಯರೂ ನಿಂತುಕೊಂಡು ಗದ್ದಲ ಮಾಡುತ್ತಿದ್ದರು. ಅಂಗಡಿಯ ಒಳಭಾಗವೋ ನರಕಕೂಪ. ಅಲ್ಲಿ

ಎಂಜಲು, ಕೊಳೆ, ಇವುಗಳೆಲ್ಲವೂ ತುಂಬಿದ್ದವು. ನೊಣಗಳು ಮುತ್ತಿದ್ದವು. ಹಳೆಯ ಹೆಂಡದ ದುರ್ವಾಸನೆ ಎತ್ತಿ ಹೊಡೆಯುತ್ತಿತ್ತು. ಗುಂಪು ಕಟ್ಟಿಕೊಂಡಿದ್ದ ಜನರು ಅಲ್ಲಲ್ಲಿ ಗಲಾಟೆ ಮಾಡುತ್ತಿದ್ದರು.

"ಲೋ ನಂಜ! ಇನ್ನೊಂದು ಸಲ ಹಾಗೆ ಹೇಳಿದರೆ ಕಪಾಳವು ಬಿಸಿಯಾಗುತ್ತೆ" ಎಂದನು ಕರಿಯ.

ನಂಜ: 'ಕಪಾಳಕ್ಕೆ ಕೊಡುವೆಯಾ? ಅಬ್ಬಬ್ಬಾ ಇವನ ಶೌರ‍್ಯವನ್ನು ನೋಡಿರೋ! ಕೈಹಿಡಿದ ಹೆಂಡತಿಯನ್ನು ನೆಟ್ಟಗೆ ಇಟ್ಟುಕೊಳ್ಳಲು ಕೈಲಾಗದವನಿಗೆ ವೀರನಂತೆ ಮಾತುಗಳು ಬೇರೆ.'

ಇದನ್ನು ಕೇಳಿ ಕರಿಯನು ತನ್ನ ಕುಡಿಕೆಯನ್ನು ಅವನ ಮುಖದ ಮೇಲೆ ಎಸೆದು ರೇಗಿದನು. ಏಟು ತಿಂದವನ ಮೂಗಿನಿಂದ ರಕ್ತವು ಸುರಿಯಿತು.

"ಎಲೇ ಮುಠ್ಠಾಳರಾ! ಹೆಂಡವನ್ನು ಚೆಲ್ಲುತ್ತೀರಲ್ಲೋ. ಒಳ್ಳೆ ಸೊಗಸಾದ ಹೆಂಡವನ್ನು ಮೋಸಗಾರರಾದ ಹೆಂಗಸರಿಗಾಗಿ ಯಾರಾದರೂ ಚೆಲ್ಲುವುದುಂಟೆ? ಹೆಂಗಸರ ಮಾತನ್ನು ನಂಬಬಾರದಪ್ಪಾ ನಂಬಬಾರದು" ಎಂದು ಪಕ್ಕದಲ್ಲಿದ್ದವನೊಬ್ಬನು ಹೇಳಿದನು.

'ಅಯ್ಯೋ ನಂಜ ಸತ್ತುಹೋದ' ಎಂದು ಇನ್ನೊಬ್ಬನು ಕೂಗಿಕೊಳ್ಳುತ್ತಾ ಹೋಗಿ ಏಟು ತಿಂದವನ ಮುಖದಲ್ಲಿ ಸುರಿಯುತ್ತಿದ್ದ ರಕ್ತವನ್ನು ಒರಸಿದನು. ನಂಜನಿಗೆ ಹೆಚ್ಚು ಗಾಯವಾಗಲಿಲ್ಲ. ಅವನು ಕೋಪದಿಂದೆದ್ದು ಒಂದು ಇಟ್ಟಿಗೆಯನ್ನು ತೆಗೆದುಕೊಂಡು ಕರಿಯನ ಮೇಲೆಸೆದನು. ಕರಿಯನು ತಲೆಯನ್ನು ಬಗ್ಗಿಸಿ ಏಟನ್ನು ತಪ್ಪಿಸಿಕೊಂಡನು.

ಅಂಗಡಿಯಲ್ಲಿ ಜಗಳವಾಡಕೂಡದೆಂದು ಅಂಗಡಿಯವನು ಕೂಗಿಕೊಂಡನು.

ಕರಿಯನು ಹೊರಕ್ಕೋಡಿದನು. ಅವನನ್ನು ಹಿಡಿಯಲು ಹೋದ ನಂಜನು ಹೊಸಲನ್ನು ಎಡವಿ ಮುಗ್ಗರಿಸಿ ಬಿದ್ದನು. ಕರಿಯನು ಬೇಗ ಗಾಡಿಯನ್ನು ಹತ್ತಿ ಗಟ್ಟಿಯಾಗಿ ನಂಜನನ್ನು ಬೈಯುತ್ತಾ ಗಾಡಿಯನ್ನೋಡಿಸಿಕೊಂಡು ಹೊರಟುಹೋದನು.

ಪ್ರತಿ ದಿನಕ್ಕಿಂತ ಮುಂಚಿತವಾಗಿಯೇ ಇಂದು ಕರಿಯನು ಮನೆಗೆ ಹೋಗಿ ಸೇರಿದನು. ಬಾಗಿಲ ಅಗಳಿಯು ಹಾಕಿತ್ತು. 'ಲೇ ಬಾಗಿಲ ಅಗಳಿಯನ್ನು ಹಾಕಿಕೊಂಡು ಏನು ಮಾಡುತ್ತೀಯಾ? ಎಷ್ಟು ಹೊತ್ತೇ ನಾನು ಕಾದಿರುವುದು? ಬಾಗಿಲನ್ನು ತೆಗಿ. ಎತ್ತುಗಳಿಗೆ ನೀರು ಕೊಡು' ಎಂದು ಕರಿಯನು ಕೂಗಿದನು.

ಒಳಗೆ ಯಾರೋ ನಡೆಯುವ ಶಬ್ದವು ಕೇಳಿಬಂದಿತು. ಬಾಗಿಲು ತೆಗೆಯುವುದು ಸಾವಕಾಶವಾಯಿತು. ಕರಿಯನು ಕೂಗುವುದನ್ನು ನಿಲ್ಲಿಸಲೇ ಇಲ್ಲ.

ಸ್ವಲ್ಪ ಹೊತ್ತಾದಮೇಲೆ ಲಕ್ಷ್ಮಿ ಬಾಗಿಲನ್ನು ತೆಗೆದು ಹೊರಕ್ಕೆ ಬಂದು ಕರಿಯನ ಮುಂದೆ ಬಂದು ನಿಂತು "ಸ್ವಲ್ಪ ಇತ್ತ ಬನ್ನಿ. ಈ ಎಮ್ಮೆಯನ್ನು ನೋಡಿರಿ. ಅದಕ್ಕೇನಾಗಿದೆಯೋ ತಿಳಿಯದೆ ಇದೆ. ಒದೆಯುತ್ತೆ, ಹಾಲು ಕರೆಯುವುದೇ ಕಷ್ಟ" ಎಂದಳು.

"ಎಮ್ಮೆ ಹಾಳಾಗಲಿ. ನನಗೆ ಬಾಯಾರಿಕೆ. ಸ್ವಲ್ಪ ನೀರನ್ನು ತೆಗೆದುಕೊಂಡು ಬಾ" ಎಂದು ಹೇಳುತ್ತಾ ಊಗಲಾಡುತ್ತಾ ಒಳಕ್ಕೆ ಹೋದನು.

ಒಳಗಿದ್ದ ಇಸ್ಮೇಲನು ಗೋಡೆಯ ಮಗ್ಗುಲಲ್ಲೇ ಸರಿಯುತ್ತ ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟನು.

"ಓಹೋ, ಮನೇಲಿ ಈ ತುರುಕರ ಹುಡುಗ ಏನು ಮಾಡುತ್ತಾನೆ! ಎಲೇ ಸೂಳೇ ಮಗಳೇ" ಎಂದು ಕೂಗಿಕೊಂಡು ಕರಿಯನು ಕೆಳಗೆ ಬಿದ್ದಿದ್ದ ಹಾರೆಯನ್ನು ತೆಗೆದು ಲಕ್ಷ್ಮಿಯ ಮೇಲೆ ಬೀಸಿದನು. ಅನಂತರ ಮಚ್ಚನ್ನು ತೆಗೆದುಕೊಂಡು, ಓಡಿಹೋಗುತ್ತಿದ್ದ ಇಸ್ಮೇಲನ ಮೇಲೆ ಬಲವೆಲ್ಲವನ್ನೂ ಬಿಟ್ಟು ಎಸೆದನು. ಇಸ್ಮೇಲನು ಆ ಏಟಿಗೆ ಕೆಳಕ್ಕೆ ಬಿದ್ದನು. ಅವನ ತಲೆಯಿಂದ ರಕ್ತವು ಧಾರೆಧಾರೆಯಾಗಿ ಹರಿಯಿತು. ಆಮೇಲೆ ಕರಿಯನು ಲಕ್ಷ್ಮಿಯ ಮೇಲೆ ಹಾಯ್ದನು.

ಅವಳು ಭಾವನ ಮನೆಗೆ ಓಡಿದಳು. ಕರಿಯನು ಸ್ವಲ್ಪ ದೂರ ಅವಳನ್ನು ಹಿಂಬಾಲಿಸಿದನು. ಅನಂತರ ಈ ಗದ್ದಲವನ್ನು ಕೇಳಿ ನೆರೆಹೊರೆಯವರು ತನ್ನ ಹಿಂದೆ ಬರುವುದನ್ನು ನೋಡಿ ಹಿಂತಿರುಗಿದನು. ಆಗ

ಕೆಳಗೆ ಬಿದ್ದಿದ್ದ ಇಸ್ಮೇಲನು ಏಳುವುದಕ್ಕೆ ಪ್ರಯತ್ನಪಡುತ್ತಿದ್ದುದನ್ನು ಕಂಡು ಕೇಕೆಹಾಕುತ್ತ ಅವನನ್ನು ಚೂರುಚೂರಾಗಿ ಕತ್ತರಿಸಬೇಕೆಂಬ ಉದ್ದೇಶದಿಂದೋಡಿ ಬಂದನು. ಆದರೆ ಅಷ್ಟರೊಳಗೆ ಸೇರಿದ್ದ ಜನರು ಅವನನ್ನು ತಡೆದ್ದು ನಿಲ್ಲಿಸಿ ಕೈಯಲ್ಲಿದ್ದ ಮಚ್ಚನ್ನು ಕಿತ್ತುಕೊಂಡರು.

## ೭. ನರಕ

ರಾಮಾಪುರದ ಸ್ಟೇಷನ್ನಿನಲ್ಲಿ ಕರಿಯನನ್ನೂ ಲಕ್ಷ್ಮಿಯನ್ನೂ ಬೇರೆ ಬೇರೆ ಕೊಠಡಿಯಲ್ಲಿ ನಿರ್ಬಂಧದಲ್ಲಿಟ್ಟಿದ್ದರು. ಪೋಲೀಸ್ ಜವಾನರನೇಕರು ಅವಳಿದ್ದ ಕೋಣೆಯ ಹೊರಗೆ ಹೆಜ್ಜೆ ಹಾಕುತ್ತ ಅವಳನ್ನು ನೋಡಿ ಮುಗುಳ್ನಗೆಯನ್ನು ಬೀರುತ್ತಿದ್ದರು. ಅವಳೊಡನೆ ಮಾತಾಡುವುದಕ್ಕೆ ಸಮಯ ಕಲ್ಪಿಸಿಕೊಂಡು ಎಲ್ಲರೂ ಮಾತಾಡಿದರು. ಆದರೆ ಲಕ್ಷ್ಮಿಯು ಆಳವಾದ ದುಃಖಸಾಗರದಲ್ಲಿ ಬಿದ್ದಿದ್ದಳು. ಅವಳ ಮನಸ್ಸು ಪಶ್ಚಾತ್ತಾಪದ ಶೃಂಖಲೆಗಳಲ್ಲಿ ತೊಡರಿಹೋಗಿತ್ತು. ಬಯಲಿನಲ್ಲಿ ಸ್ವತಂತ್ರದಿಂದ ತಿರುಗುತ್ತಿದ್ದ ಪಕ್ಷಿಯನ್ನು ತಂದು ಪಂಜರದಲ್ಲಿಟ್ಟಹಾಗಾಯಿತು. ಪಂಜರದಲ್ಲಿ ಅನುಭವಿಸುವ ಸುಖವು ಪಕ್ಷಿಗೆ ಗೊತ್ತು. ನಮಗೇನು ಗೊತ್ತು ?

'ನಿಜ ಹೇಳಿಬಿಡು. ಹಾಗೆ ಮಾಡಿದರೆ ನಿನ್ನನ್ನು ಬಿಡಿಸಲು ಸಾಧ್ಯ' ಎಂದರು ಸಬ್ ಇನ್ಸ್‌ಪೆಕ್ಟರು.

ಕರಿಯ:—'ಮರೆಮಾಚುವುದಕ್ಕೇನಿರುವುದು ? ನನಗೊಂದೂ ತಿಳಿಯದು. ಶುಕ್ರವಾರವೇ ನಾನು ನಂಜರಾಜಪುರನಿಂದ ಬಂದಿದ್ದು.'

ಸಬ್ ಇ:—'ಆ ಡೋಂಗೆಲ್ಲಾ ಆಗೋದಿಲ್ಲಪ್ಪಾ. ನಿನ್ನ ಹೆಂಡತಿ ಎಲ್ಲಾ ಹೇಳಿಬಿಟ್ಟಳು.'

ಕರಿಯ:—'ಆ ಚಂಡಾಲಿ ಎಲ್ಲಾ ಹೇಳಿಬಿಟ್ಟಳೆ ? ಎಲ್ಲಾ ಆ ಪಾಪಿಯಿಂದಲೇ ಬಂದದ್ದು.'

ಸಬ್ ಇ:—'ಹೌದು, ನಿಜ, ಎಲ್ಲಾ ಹೆಂಗಸರಿಂದಲೇ ಬರೋದು. ಒಳ್ಳೇದು, ಈಗ ಮರೆಮಾಚದೆ ಎಲ್ಲಾ ಹೇಳಿಬಿಡು. ಭಯಪಡಬೇಡ.'

ಕರಿಯ:—'ನಾನೇನು ಹೇಳಲಿ ಬುದ್ದೀ ! ಎಲ್ಲಾ ಅವಳೇ ಹೇಳಿಬಿಟ್ಟ ಳೆಂದು ಹೇಳಿದಿರಿ.'

ಸಬ್ ಇ‌ಃ:—ನಿಜ, ನಿನ್ನ ಬಾಯಿಂದಲೂ ಹೇಳಬೇಕು. ಇಲ್ಲದಿದ್ದರೆ ಸಜಾ ಏಳು ವರ್ಷ, ಭಡವಾ !'

ಕರಿಯ:—'ಏಳು ವರ್ಷವಾದರೂ ಸರಿ, ನಾನೊಂದೂ ಹೇಳುವುದಿಲ್ಲ'

ಹೆಡ್ ಕಾನ್ಸ್ಟೇಬಲ್:—'ಒಳ್ಳೆಯ ಮಾತಿನಲ್ಲಿ ಕೇಳಿದರೆ ಈ ಒಕ್ಕಲು ನನ್ನ ಮಗ ಹೀಗೇ ಹೇಳೋದು. ಅವನಿಗೆ (ಇಲ್ಲಿ ಬರೆಯಲು ತಕ್ಕುದಲ್ಲದ ಒಂದು ವಿಧವಾದ ಚಿತ್ರಹಿಂಸೆಯನ್ನು ಸೂಚಿಸಿ) ಆ ಹಿಂಸೆ ಮಾಡಿದರಾಯಿತು: ಆಗಲೇ ನಿಜ ಕಕ್ಕುತ್ತಾನೆ.'

ಸಬ್ ಇ‌ಃ:—'ಹೌದು. ಆಮೇಲೆ ಅವನನ್ನು ಚೆನ್ನಾಗಿ ವಿಚಾರಿಸಿ'.

"ಇಲ್ಲಿ ನೋಡು ಹೆಣ್ಣುಮಗಳೇ. ನೀನು ಒಂದನ್ನೂ ಮಾಡಲಿಲ್ಲವೆಂದು ತೋರುವುದು. ನಿಜವನ್ನು ಹೇಳಿಬಿಡು. ತಪ್ಪಿಸಿಕೊಳ್ಳಬಹುದು. ಗುರುವಾರ ಸಾಯಂಕಾಲ ಖಾದರ್‌ಖಾನನೂ ಅವನ ಮಗನೂ ನಿನ್ನ ಮನೆಗೆ ಬಂದಿದ್ದರೆ ?" ಎಂದು ಲಕ್ಷ್ಮಿಯನ್ನು ಹೆಡ್‌ಕಾನ್ಸ್ಟೇಬಲನು ಕೇಳಿದನು.

"ತಂದೆಯೂ ಮಗನೂ ? ಇಲ್ಲವೇ ಇಲ್ಲ. ಸತ್ಯವಾಗಿ ಬಂದಿರಲಿಲ್ಲ ?" ಎಂದಳು ಲಕ್ಷ್ಮಿ.

'ಒಳ್ಳೆಯದು. ಇಸ್ಮೇಲನೊಬ್ಬನೇ ಬಂದಿದ್ದನಲ್ಲವೇ ?' ಎಂದು ಹೆಡ್ ಕಾನ್ಸ್ಟೇಬಲ್ಲನು ಕೇಳಿ ಪಕ್ಕದಲ್ಲಿದ್ದ ಜವಾನರನ್ನು ನೋಡಿ ಕಣ್ಣು ಮಿಟಕಿಸಿದನು.

'ಯಜಮಾನರೇ, ಹೀಗೆಲ್ಲಾ ದೊಡ್ಡವರು ಮಾತಾಡಬಾರದು. ನನ್ನ ಮನೆಗೆ ತುರುಕನೇತಕ್ಕೆ ನುಗ್ಗುವನು ? ಅವನಿಗೇನು ಕೆಲಸ ? ಈ ವಿಧವಾದ ಅಪಮಾನಕರವಾದ ಸಂಗತಿಗಳನ್ನು ಕೇಳಬಹುದೆ ನೀವು ? ನನ್ನನ್ನು ಕಳುಹಿಸಿ ಮನೆಗೆ. ಮಾವ ಅತ್ತೆ ಎಲ್ಲರೂ ಅಲ್ಲಿರುವರು. ಅವರನ್ನು ಕೇಳಿದರೆ ಎಲ್ಲವನ್ನೂ ಹೇಳುವರು.' ಎಂದಳು ಲಕ್ಷ್ಮಿ.

'ಮನೆಗೆ ಕಳುಹಿಸಬೇಕೆ ? ಅಷ್ಟು ಅವಸರವೇ ? ನಿಜವನ್ನು ಹೇಳಿ

ಬಿಡು. ಆಗ ಮನೆಗೆ ಹೋಗಬಹುದು. ಇಲ್ಲದಿದ್ದರೆ ಹೋಗಕೂಡದು. ಇಲ್ಲಿಯೇ ಇರಬೇಕು' ಎಂದನು ಕಾನ್‌ಸ್ಟೇಬಲ್ಲನು.

'ಅಯ್ಯೋ ದೇವರೇ !' ಎಂದು ಲಕ್ಷ್ಮಿಯು ಕೂಗಿಕೊಂಡಳು.

'ಒಳ್ಳೆಯ ಮಾತು ಇವರ ಹತ್ತಿರ ಬೆಳೆಯುವುದಿಲ್ಲಪ್ಪಾ. ಇವಳು ಬಹಳ....ಕೆಲಸದವಳು. ಎಷ್ಟೋ ಗಂಡಸರನ್ನು ಕೆಡಿಸಿದವಳಲ್ಲವೆ ಇವಳು?' ಎಂದನು ಕಾನ್‌ಸ್ಟೇಬಲ್ಲನು.

'ಯಜಮಾನರೇ, ನೀವೆಲ್ಲರೂ ಹೆಣ್ಣು ಮಕ್ಕಳನ್ನು ಹಡೆಯಲಿಲ್ಲವೆ ? ಒಂದೂ ತಿಳಿಯದ ಬಡ ಹೆಂಗಸಿನ ಮೇಲೆ ದಯೆ ತೋರಿಸಕೂಡದೆ ? ನಾನೂ ನಿಮ್ಮ ಜೊತೆಯಲ್ಲೇ ಹುಟ್ಟಿದವಳೆಂದು ತಿಳಿಯಿರಿ' ಎಂದಳು ಲಕ್ಷ್ಮಿ.

'ಲೇ ಕಬ್ಬಿಣವನ್ನು ಕಾಯಿಸಿ ತೆಗೆದುಕೊಂಡು ಬನ್ರೋ' ಎಂದು ಕಾನ್‌ಸ್ಟೇಬಲ್ಲನು ಕೂಗಿದನು.

'ಸ್ವಾಮಿ, ಸ್ವಾಮಿ ! ನನ್ನ ಯಜಮಾನರನ್ನು ಕೇಳಿರಿ. ಅವರೆಲ್ಲ ವನ್ನೂ ಹೇಳುವರು. ಈ ದಿಕ್ಕುಕೆಟ್ಟ ಹೆಣ್ಣು ಮಗಳನ್ನೇಕೆ ಕೊಲ್ಲುವಿರಿ ?' ಎಂದು ಲಕ್ಷ್ಮಿಯು ಅರಚಿಕೊಂಡಳು. 'ನಿನ್ನ ಗಂಡನನ್ನು ಕೇಳದೆ ಇರುವೆ ವೇನು ? ಅವನು ಎಲ್ಲವನ್ನೂ ಹೇಳಿಬಿಟ್ಟನು. ನೀನೇ ಮರೆಮಾಚುತ್ತಿರುವೆ' ಎಂದರು ಸಬ್ ಇನ್‌ಸ್ಪೆಕ್ಟರು.

'ಎಲ್ಲಾ ಹೇಳಿಬಿಟ್ಟರೆ ? ಅಯ್ಯೋ' ಎಂದು ಸಂಕಟದಿಂದ ಲಕ್ಷ್ಮಿಯು ಹೇಳಿದಳು.

'ಹೌದೌದು ! ಎಲ್ಲಾ ನಿನ್ನಿಂದ ಬಂದ ಕೇಡೆಂದು ಅವನೇ ಹೇಳಿ ದನು' ಎಂದರು ಇನ್‌ಸ್ಪೆಕ್ಟರು.

'ಅಯ್ಯೋ ದೇವರೇ ! ಎಲ್ಲವನ್ನೂ ಹೇಳಿಬಿಟ್ಟರೇ' ಎಂದು ಕೈಯನ್ನು ಹಿಸುಕಿಕೊಂಡು ಗೋಳಾಡಿದಳು.

ಸ್ಮರಣೆ ತಪ್ಪಿ ಲಕ್ಷ್ಮಿ ಧೊಪ್ಪೆಂದು ಬಿದ್ದುಬಿಟ್ಟಳು.

'ಅಳುವುದರಿಂದ ಉಪಯೋಗವಿಲ್ಲ. ಇದರಿಂದ ನಮ್ಮನ್ನು ಮೋಸ ಗೊಳಿಸಲಾಗುವುದಿಲ್ಲ. ಬಹಳ ಬೂಟಾಟಿಕೆಯ ಹೆಂಗಸು ನೀನು. ಎಷ್ಟು

ಗಂಡಸರನ್ನು ಹೀಗೆ ತಲೆ ಸವರಿದ್ದೀಯ?' ಎಂದು ಕಾನ್ಸ್ಟೇಬಲ್ಲನು ಕೇಳಿದನು.

'ನೀವೆಲ್ಲರೂ ನನ್ನ ಜೊತೆಗೆ ಹುಟ್ಟಿದವರಂತಿರುವಿರಿ. ಹಾಗೆ ಮಾತಾಡಬೇಡಿರಿ, ಆ ಮನುಷ್ಯನು ಬಂದು ಕಂತು ಹಣವನ್ನು ಕೇಳಿದನು.' ಎಂದಳು ಲಕ್ಷ್ಮಿ. 'ಆಹಾ! ದಾರಿಗೆ ಬರುತ್ತಿದ್ದೀಯಾ?' ಎಂದನು ಕಾನ್ಸ್ಟೇಬಲ್ಲನು. ಸಬ್ ಇನ್ಸ್ಪೆಕ್ಟರ ಕಡೆ ತಿರುಗಿ 'ಏಕೆ, ನಾನು ಹೇಳಲಿಲ್ಲವೇ,' ಎಂದನು. ಆ ಮೇಲೆ ಲಕ್ಷ್ಮಿಯನ್ನು ಕುರಿತು 'ಹೆಣ್ಣು ಮಗಳೇ, ನೋಡು. ನಿಜ ಹೇಳು, ಬಿಟ್ಟುಬಿಡುವೆವು. ಹೆಣ್ಣು ಮಕ್ಕಳನ್ನು ಜೈಲಿಗೆ ಕಳುಹಿಸಬೇಕೆಂದು ನಮಗೆ ಆಸೆಯೇನು? ನಿನ್ನ ಗಂಡನನ್ನು ಸ್ವಲ್ಪ ಶಿಕ್ಷೆ ಕೊಟ್ಟು ಬಿಟ್ಟುಬಿಡುವೆವು. ಅದಕ್ಕೆ ನಾವು ಜವಾಬ್ದಾರರು' ಎಂದನು.

'ಅಯ್ಯೋ ಈ ರಾತ್ರಿ ನನ್ನನ್ನು ಮನೆಗೆ ಕಳುಹಿಸಿರಿ. ನಾಳೆ ಎಲ್ಲವನ್ನೂ ಹೇಳಿಬಿಡುವೆನು' ಎಂದಳು ಲಕ್ಷ್ಮಿ.

'ಒಳ್ಳೆಯದು, ಅವಳು ಹೋಗಲಿ, ನಿಜವನ್ನು ಹೇಳಿಬಿಡುವಳೆಂದು ತೋರುವುದು' ಎಂದರು ಸಬ್ ಇನ್ಸ್ಪೆಕ್ಟರು.

'ಮನೆಗೆ ಹೋದರೆ ನಿಜವು ಬರಲಾರದು' ಎಂದು ಕಾನ್ಸ್ಟೇಬಲ್ಲನು.

ಸಬ್ ಇನ್ಸ್ಪೆಕ್ಟರು ಕಾನ್ಸ್ಟೇಬಲ್ಲನ ಕಿವಿಯ ಹತ್ತಿರ ಹೋಗಿ 'ಆದರೆ ಅವಳನ್ನು ನಾವು ಕೈದು ಮಾಡಿಲ್ಲವಲ್ಲ. ರಾತ್ರಿ ಹೇಗೆ ಸ್ಟೇಷನ್ನಿನಲ್ಲಿ ಇಟ್ಟರ ಲಿಕ್ಕಾದೀತು' ಎಂದು ರಹಸ್ಯವಾಗಿ ಹೇಳಿದರು.

'ಒಳ್ಳೆಯದಯ್ಯಾ, ಹಾಗಾದರೆ ಅವಳನ್ನು ಈಗ ಬಂದೋಬಸ್ತು ಸಹಿತವಾಗಿ ಕಳುಹಿಸಿ. ನಾಳೆ ಪುತ್ತೆ ಕರೆದುಕೊಂಡು ಬರುವಂತೆ ಮಾಡಬೇಕು..ಏ ಹೆಣ್ಣುಮಗಳೇ, ಇದ್ದುದನ್ನು ಇದ್ದಹಾಗೆ ಹೇಳಿಬಿಡು. ಇಲ್ಲದಿದ್ದರೆ ತಿಳಿಯಿತೆ....?' ಎಂದು ಹೆದರಿಸಿದರು.

## ೮. ಲೋಕ

ಕರಿಯನ ತಂದೆಯು ತನ್ನ ದೊಡ್ಡ ಮಗನನ್ನು ಬೇಡಿಕೊಂಡು ಒಬ್ಬ ವಕೀಲನನ್ನು ಗೊತ್ತು ಮಾಡಿದನು. ಖರ್ಚಿಗಾಗಿ ಕರಿಯನ ಗಾಡಿಯನ್ನು

ಮಾರಿದರು. ಆ ಹಣವು ಮುಗಿದು ಹೋಗಲು ಪಕ್ಕದ ಗ್ರಾಮದಲ್ಲಿದ್ದ ಎಮ್ಮೆಯನ್ನಡವಿಟ್ಟು ಸಾಲ ತಂದರು. ಲಕ್ಷ್ಮಿಯಿಂದಲೇ ಇಷ್ಟು ಅನರ್ಥ ಗಳುಂಟಾಯಿತೆಂದು ಅವಳನ್ನೆಲ್ಲರೂ ಮನಸ್ಸು ಬಂದಂತೆ ಬೈದರು.

ಮ್ಯಾಜಿಸ್ಟ್ರೇಟರ ಮುಂದೆ ಕರಿಯನ ಲಾಯರು ಆ ಅಪರಾಧ ನಡೆದ ದಿನ ಅವನು ನಂಜರಾಜಪುರದಲ್ಲಿದ್ದನೆಂದು ಹೇಳಿದರು. ಅವರು ಒಂದೇ ಸಮನೆ ಮೂರು ಘಂಟೆಯ ಕಾಲ ಮಾತಾಡಿದ್ದನ್ನು ನೋಡಿ ಕರಿಯನ ಬಂಧುಗಳೆಲ್ಲರೂ ತೃಪ್ತಿ ಹೊಂದಿದರು.

ಖಾದರ್ ಖಾನನು ದೈವಸಾಕ್ಷಿಯಾಗಿ ಪ್ರಮಾಣ ಮಾಡಿ ತಾನೂ ತನ್ನ ಮಗನೂ ಕರಿಯನ ಮನೆಗೆ ಹೋಗಿ ತನಗೆ ಸಲ್ಲಬೇಕಾದ ಹಣ ಕೇಳಿದ ಹಾಗೂ ಅವನು ಕೋಪಿಸಿಕೊಂಡು ಬೈದಹಾಗೂ ತಾನು ಅವನನ್ನು ಖಂಡಿಸಿ ಹಣ ಕೊಡಲೇಬೇಕೆಂದು ಕೇಳಲು ಕರಿಯನು ಮಚ್ಚಿನಿಂದ ತನ್ನನ್ನು ಕಡಿ ಯಲು ಓಡಿಬಂದಹಾಗೂ, ಬಹಳ ಸ್ವಲ್ಪದರಲ್ಲಿ ತಪ್ಪಿಸಿಕೊಂಡ ಹಾಗೂ ಆದರೆ ಮಧ್ಯೆ ಬಂದ ತನ್ನ ಮಗನು ಘಾಯ ಹೊಂದಿದ ಹಾಗೂ ಏಟು ತಲೆಯ ಮೇಲೆ ಬಿದ್ದಿದ್ದರೆ ಪ್ರಾಣವೇ ಹೋಗುತ್ತಿದ್ದಿತೆಂದೂ ಒಳ್ಳೆಯ ವೇಳೆ ಯಾದ್ದರಿಂದ ಹಾಗೆ ಬೀಳದೆ ಬಲ ಕಿವಿಯ ಮೇಲೆ ಸವರಿಕೊಂಡು ಹೋಯಿ ತೆಂದೂ ಹೇಳಿದನು.

ಲಕ್ಷ್ಮಿಯು ತನ್ನ ಸಾಕ್ಷ್ಯವನ್ನು ಕೊಟ್ಟಳು. (ಲಾಯರು ಹೇಳಿ ಕೊಟ್ಟಿದ್ದಂತೆ) ಒಂದೂ ನಡೆಯಲಿಲ್ಲವೆಂದೂ ಪೋಲೀಸಿನವರ ಬಳಿ ಕೊಟ್ಟಿದ್ದ ವಾಙ್ಮೂಲವು ತನ್ನನ್ನು ಹಿಂಸೆ ಮಾಡಿ ಹೆದರಿಸಿ ತೆಗೆದುಕೊಂಡಿ ದ್ದೆಂದೂ ಹೇಳಿದಳು.

ಮ್ಯಾಜಿಸ್ಟ್ರೇಟರು ಮೊಕದ್ದಮೆಯನ್ನು ಸೆಷನ್ಸ್ ಕೋರ್ಟಿಗೆ ವಿಚಾರ ಣೆಗಾಗಿ ಕಳುಹಿಸಿದರು.

ಕರಿಯನ ಗಾಡಿ ಎತ್ತುಗಳನ್ನು ಈವೇಳೆಗೆ ಮಾರಿಬಿಟ್ಟಿದ್ದರು. ಸೆಷನ್ಸ್ ಕೋರ್ಟಿಗೆ ಹೊಸ ಲಾಯರನ್ನು ಗೊತ್ತುಮಾಡಿದರು. ಲಕ್ಷ್ಮಿಯು ತನ್ನ ಸ್ವಂತ ಗ್ರಾಮದಲ್ಲಿದ್ದ ಅಣ್ಣನ ಮನೆಗೆ ವಿಚಾರಣೆ ಮುಗಿಯುವವರೆಗೂ ತಂ ಗುವುದಕ್ಕೆಂದು ಹೋಗಿದ್ದಳು.

ಲಕ್ಷ್ಮಿಯ ಅಣ್ಣನು ಬಡವನು. ಅವನ ಸಂಸಾರವೇ ಅವನಿಗೆ ಕಷ್ಟವಾಗಿತ್ತು. ಅವನ ಹೆಂಡತಿ ಗೌರಿ ಲಕ್ಷ್ಮಿಯಮೇಲೆ ಉರಿದುಬಿದ್ದಳು. ಲಕ್ಷ್ಮಿಯು ಬೀದಿಯ ಬಾಗಿಲ ಹತ್ತಿರ ನಿಂತು ಅಳುತ್ತಾ ಅಣ್ಣನೊಡನೆ ಮಾತಾಡುತ್ತಿರಲು ಅವನ ಹೆಂಡತಿ ಹೊರಕ್ಕೆ ಬಂದು 'ಕಂಡವರನ್ನು ನಮ್ಮ ಮನೆಯಲ್ಲಿಟ್ಟುಕೊಳ್ಳಲು ಆಗುವುದಿಲ್ಲ. ನಮ್ಮ ಹೊಟ್ಟೆಯ ಪಾಡೇ ನಮಗೆ ಕಷ್ಟ' ಎಂದಳು

ಹೀಗೆ ಹೇಳಿ ಬೀದಿಯ ಬಾಗಿಲಿಗೆ ಬೀಗ ಹಾಕಿಕೊಂಡು ಗದ್ದೆಗೆ ಹೊರಟು ಹೋದಳು

'ಲಕ್ಷ್ಮೀ, ದನದ ಕೊಟ್ಟಿಗೆಯಲ್ಲಿರುವ ಗೊಬ್ಬರವನ್ನು ಕೂಡಿಹಾಕಿ ಜಮೀನಿಗೆ ತೆಗೆದುಕೊಂಡು ಹೋಗು' ಎಂದು ಅವಳ ಅಣ್ಣನು ಹೇಳಿದನು.

ಲಕ್ಷ್ಮಿ ಅವರನ್ನು ನೋಡಿ ಬೇಸರಪಡದೆ ಕೆಲಸಮಾಡಿ ಉಪಕಾರಿಯಾಗಿರಲು ಪ್ರಯತ್ನಪಟ್ಟಳು. ತಾನು ತಿನ್ನುವ ಹಿಟ್ಟಿಗಾಗಿ ಕಷ್ಟಪಟ್ಟು ದುಡಿದಳು. ಆದರೆ ಅತ್ತಿಗೆಗೆ ಮಾತ್ರ ಅವಳ ಮೇಲೆ ಕರುಣ ಹುಟ್ಟಲಿಲ್ಲ. ತನ್ನ ಕೈಲಾದಮಟ್ಟಿಗೂ ಹಿಂಸೆಯನ್ನು ಕೊಟ್ಟಳು. ಲಕ್ಷ್ಮಿ ಎಲ್ಲವನ್ನೂ ತಾಳ್ಮೆಯಿಂದ ಸಹಿಸಿಕೊಂಡಳು.

ಒಂದು ದಿನ ಕಾನ್‌ಸ್ಟೇಬಲನೊಬ್ಬನು ಬಂದನು. ಕರಿಯನ ಮೊಕದ್ದಮೆಯು ದೊಡ್ಡ ಕೋರ್ಟಿಗೆ ವಿಚಾರಣೆಗೆ ಬರುವುದರಿಂದ ಸಾಕ್ಷಿ ಹೇಳಬೇಕೆಂದು ಲಕ್ಷ್ಮಿಯನ್ನು ಕೂಗಿದನು. ಅತ್ತಿಗೆಯ ನಿರ್ದಯದಲ್ಲಿ ಬಿದ್ದಿದ್ದ ಲಕ್ಷ್ಮಿಗೆ ಇದೇ ಹಿತವಾಗಿತ್ತು. ಪೋಲೀಸ್ ಕಾನ್‌ಸ್ಟೇಬಲನು ವಯಸ್ಸಾದ ಮುಸಲ್ಮಾನನು. ಒಳ್ಳೆಯ ಎತ್ತರ. ದೊಡ್ಡ ಮೀಸೆ. ದಾಕ್ಷಿಣ್ಯರಹಿತ ಪುರುಷನಾಗಿ ತೋರಿದರೂ ಮಾತನಾಡುವಾಗ ಪ್ರೀತಿಯ ತಂದೆಯಂತಿದ್ದನು. ಅವರು ರೈಲುಗಾಡಿಯನ್ನು ಹತ್ತಿ ಹೋಗುತ್ತಿರಲು, ಲಕ್ಷ್ಮಿಯೊಡನೆ 'ನಡೆದದ್ದು ನಡೆದ ಹಾಗೆ ಹೇಳಿಬಿಡು ತಾಯಿ! ಜಡ್ಜಿ ಒಂದು ವೇಳೆ ಕೃಪೆಮಾಡಿ ನಿನ್ನ ಗಂಡನನ್ನು ಬಿಟ್ಟುಬಿಡಬಹುದು' ಎಂದನು ಆ ಕಾನ್‌ಸ್ಟೇಬಲನು.

'ನಿಜವನ್ನು ಹೇಗಿರಿ ಹೇಳುವುದು? ಅದು ಒಂದು ದೊಡ್ಡ ನಾಚಿಕೆಗೇಡಿನ ಕೆಲಸ' ಎಂದಳು ಲಕ್ಷ್ಮಿ.

'ನಾಚಿಕೆಯೇನು ? ಅಂತಹ ತಪ್ಪು ಎಷ್ಟೋ ಜನರು ಮಾಡುತ್ತಾರೆ. ಒಂದು ಸಲವಾದರೂ ಮೋಸಹೋಗದಿರುವವರು ಅಪರೂಪ. ಭಗವಂತನು ನಮ್ಮೆಲ್ಲರನ್ನು ಕಾಪಾಡಿಕೊಂಡು ಬರುವನು. ಕೆಲವು ವೇಳೆ ನಮ್ಮ ಕೈಯಲ್ಲಿ ತಪ್ಪು ಮಾಡಿಸುವನು.' ಎಂದನು ಕಾನ್ಸ್ಟೇಬಲನು.

'ಎಲ್ಲವನ್ನೂ ಹೇಳು ಎಂದು ಹೇಳುತ್ತೀರಾ ? ಆಮೇಲೆ ನನ್ನನ್ನು ಜಾತಿಯಿಂದ ಹೊರಕ್ಕಿಡುವರು. ನನ್ನ ಗಂಡನೂ ಬಿಡುವನು. ಆ ಮೇಲೆ ನನ್ನ ಗತಿ ಏನು ?' ಎಂದಳು ಲಕ್ಷ್ಮಿ.

'ನೀನು ನಿಜವನ್ನು ಹೇಳಿದರೆ ನಿನ್ನ ಗಂಡನನ್ನು ಆರು ತಿಂಗಳು ಮಾತ್ರ ಸಜಾ ಮಾಡುವರು ಇಲ್ಲದಿದ್ದರೆ ಆರು ವರ್ಷ. ಇದರ ಹಿಂದೆ ಇಂಥಾದ್ದೇ ಒಂದು ಮೊಕದ್ದಮೆಯಾಗಿತ್ತು. ನೀನು ಈಗ ನಿನ್ನ ಗಂಡನಿಗೆ ಸಹಾಯ ಮಾಡಿದರೆ ಅವನು ನಿನಗೆ ಮತ್ತಷ್ಟು ಪ್ರೀತಿಯನ್ನು ತೋರಿಸುವನು. ನಿನ್ನನ್ನು ಜಾತಿಯಲ್ಲಿ ಸೇರಿಸಿಕೊಳ್ಳಲು ಯಾವುದಾದರೊಂದು ಗುಡಿಯಲ್ಲಿ ಒಂದು ಸತ್ಕಾರ್ಯ ಮಾಡಿದರಾಯಿತು. ಯಾವಾಗಲೂ ನಿಜವನ್ನು ಹೇಳುವುದು ಒಳ್ಳೆಯದು' ಎಂದನು ಆ ಕಾನ್ಸ್ಟೇಬಲನು.

ಲಕ್ಷ್ಮಿಯು ಮೌನವನ್ನು ಧರಿಸಿದಳು. ನಿಜವನ್ನು ಹೇಳೆಂದು ಅವಳ ಅಂತರಂಗದಲ್ಲಿ ಪ್ರೇರಣೆಯಾಗುತ್ತಿತ್ತು. ಆದರೆ ಬೇರೆ ಒಂದು ಬಗೆಯ ಬೋಧನೆಯು ಆ ಕ್ಷಣದಲ್ಲಿಯೇ ಹುಟ್ಟಿ, ಅದನ್ನು ಮುಚ್ಚುತ್ತಿತ್ತು. ಭಯವೂ ಶಂಕೆಯೂ ಅವಳ ಬೆನ್ನು ಹತ್ತಿದ್ದವು. 'ದೇವರೆ!' ಎಂದು ಆಗಾಗ್ಗೆ ಹೇಳುತ್ತಿದ್ದಳು.

ಪೋಲೀಸಿನವನು ಚೆನ್ನಪಟ್ಟಣದಲ್ಲಿ ಅವಳನ್ನು ರೈಲು ಹತ್ತಿಸಿದನು. ಲಕ್ಷ್ಮಿಗೆ ರೈಲು ಪ್ರಯಾಣವು ಅಂದೇ ಮೊದಲನೆಯದು. ಸ್ಟೇಷನ್ನಿನಲ್ಲಿದ್ದ ಜನಸಂದಣಿಯೂ ರೈಲುಗಾಡಿಯ ವೇಗವೂ ಅವಳನ್ನು ಬೆರಗುಮಾಡಿದವು.

ರೈಲು ಗಾಡಿಯು ಬಹಳ ವೇಗವಾಗಿ ಹೋಗುತ್ತಿತ್ತು. ಆಗ ನಗೆ ಮುಖದಿಂದ ಒಬ್ಬ ಹುಡುಗನು ಬಂದು ಹಾಡೊಂದನ್ನು ಹೇಳಲು ಮೊದಲು ಮಾಡಿದನು. ಅವನು ಎರಡೂ ಕಣ್ಣು ಕಾಣದ ಕುರುಡನು. ಹರುಕು

ಬಟ್ಟೆಯನ್ನು ಹೊದ್ದಿದ್ದ ಮತ್ತೊಬ್ಬ ಹುಡುಗನೂ ಅವನ ಜೊತೆಯಲ್ಲೇ ಹಾಡು ಹೇಳಿದನು.

'ಎಲೇ ಹುಡುಗರಾ! ಇಷ್ಟು ಹೊತ್ತು ಎಲ್ಲಿದ್ದಿರಿ' ಎಂದನು ಪೋಲೀಸಿನವನು. ಹುಡುಗರು ಹಾಡನ್ನು ನಿಲ್ಲಿಸದೆ ಮುಗುಳ್ನಗೆಯನ್ನು ತೋರಿಸುತ್ತಿದ್ದರು. ಅವರ ಹಾಡು ದೇವಗಾನದಂತಿತ್ತು. ಸಂಗೀತದ ಪಂಡಿತರೂ ಸಹ ಹಾಗೆ ಹೇಳುವುದು ಕಷ್ಟ. ಈ ಹುಡುಗರು ಎಲ್ಲಿ ಹೇಗೆ ಕಲಿತರೆಂಬುದು ಯಾರಿಗೂ ತಿಳಿಯದ ಗುಟ್ಟು. ಹಾಡು ಮುಗಿಯಿತು. ಕುರುಡ ಹುಡುಗನು ಕೈ ಚಾಚಿದನು. ಪಕ್ಕದಲ್ಲಿದ್ದ ಅವನ ಜೊತೆಗಾರನು ಆ ಹುಡುಗನ ಕೈಯನ್ನು ಹಿಡಿದುಕೊಂಡು ಗಾಡಿಯ ಸುತ್ತಲೂ ಹೋದನು. ಗಾಡಿಯಲ್ಲಿದ್ದ ಪ್ರತಿಯೊಬ್ಬರೂ ವಿಶ್ವಾಸದಿಂದ ಹಣ ಕೊಟ್ಟರು. ಲಕ್ಷ್ಮಿಯೂ ತನ್ನ ಸೆರಗಿನ ಗಂಟನ್ನು ಬಿಚ್ಚಿ ಮೂರು ಕಾಸನ್ನು ಕೊಟ್ಟಳು. ಅವಳು ಕೇಳಿದ ಹಾಡು ಆ ದಿನವೆಲ್ಲವೂ ಅವಳ ಕಿವಿಯಲ್ಲೇ ಲೀನವಾಗಿ ಹೋಗಿತ್ತು. ಆ ಹಾಡಿನಲ್ಲಿ ಏನೋ ಒಂದು ಬಗೆಯ ಗೂಢಾರ್ಥವಿದ್ದಂತೆ ತೋರಿತು. ಅವಳಿಗೆ ಅದು ಸರಿಯಾಗಿ ತಿಳಿಯಲಿಲ್ಲ. ಆದರೆ ಆ ಹಾಡಿನ ಒಂದು ಪಾದ ಮಾತ್ರ ಕುರುಡ ಹುಡುಗನ ದೈನ್ಯಸ್ವರದಲ್ಲಿ ಬೆರೆತು ಅವಳ ಮನಸ್ಸಿನಲ್ಲಿ ಆಗಾಗ್ಗೆ ತೋರುತ್ತಿತ್ತು.

## ೯. ನ್ಯಾಯ

ಬೆಂಗಳೂರಿನಲ್ಲಿ ಲಕ್ಷ್ಮಿಯನ್ನು ಒಂದು ಸಣ್ಣ ಹೊಟೇಲಿಗೆ ಪೋಲೀಸಿನವನು ಕರೆದುಕೊಂಡು ಹೋದನು. ಅಲ್ಲಿ ಅವಳಿಗೆ 'ಅರ್ಧ' ಊಟ ಹಾಕುವಂತೆ ಹೇಳಿದ್ದನು. ಆ ಹೊಟೇಲಿನ ಯಜಮಾನಿಯು ಲಕ್ಷ್ಮಿಯನ್ನು ನೋಡಿ 'ಬೆಂಗಳೂರಿಗೆ ಏಕೆ ಬಂದೆ' ಎಂದು ಕೇಳಿದಳು. 'ನನ್ನನ್ನು ಕೋರ್ಟಿಗೆ ಕರೆದುಕೊಂಡು ಬಂದಿದ್ದಾರೆ' ಎಂದು ಲಕ್ಷ್ಮಿಯು ಹೇಳಿದ ಕೂಡಲೇ ಅವಳ ಸುತ್ತಲೂ ಒಂದು ಗುಂಪು ಸೇರಿತು. ಅವರೆಲ್ಲರೂ ಚಿಕ್ಕಮಗಳೂರಿನ ಕಾಫಿತೋಟಕ್ಕೆ ಹೋಗಬೇಕೆಂದು ಬಂದಿದ್ದ ಕೂಲಿಯಾಳುಗಳು.

ಸೆಷನ್ಸ್ ಕೋರ್ಟಿನಲ್ಲಿ ಹಳೆಯ ಖೂನಿ ಮೊಕದ್ದಮೆಯೊಂದರ ವಿಚಾರಣೆಯು ಆಗುತ್ತಿದ್ದಿತು. ಆದುದರಿಂದ ಅಂದು ಕರಿಯನ ಮೊಕದ್ದಮೆ

ಯನ್ನು ತೆಗೆದುಕೊಳ್ಳಲು ಆಗಲಿಲ್ಲ. ಮರುದಿನ 'ಕೇಸು' ವಿಚಾರಣೆಗೆ ಬಂದಾಗಲೂ ಸರಕಾರದ ವಕೀಲರು ಲಕ್ಷ್ಮಿಯನ್ನು ಸಾಕ್ಷ್ಯ ಕೊಡಲಿಕ್ಕೆ ಕೂಗಲಿಲ್ಲ. ಅವಳು ಸರಕಾರಕ್ಕೆ ವಿರುದ್ಧವಾಗಿ ತಿರುಗುವಳೆಂದು 'ಪಬ್ಲಿಕ್ ಪ್ರಾಸಿಕ್ಯೂಟರ್' ಹೇಳಿದರು. ಕರಿಯನ ಲಾಯರು, ಹಾಗಾದರೆ ಅವಳನ್ನು ತಮ್ಮ ಕಡೆ ಸಾಕ್ಷಿಯಾಗಿ ವಿಚಾರಿಸುವ ಹಾಗೂ ಅವಳನ್ನು ಊರಿಗೆ ಹೋಗಸದೆ ನಿಲ್ಲಿಸಬೇಕೆಂದೂ ಕೋರ್ಟಿನವರನ್ನು ಕೇಳಿಕೊಂಡರು. ಸಾಯಂಕಾಲ ಕರಿಯನ ಅಣ್ಣನು ಅವಳನ್ನು ಲಾಯರ್ ಬಳಿಗೆ ಕರೆದುಕೊಂಡು ಹೋದನು ಆ ಮುಸಲ್ಮಾನ ಪೋಲೀಸಿನವನು ದಾರಿಯಲ್ಲಿ ಹೇಳಿದಂತೆಯೇ ನಿಜವನ್ನು ಹೇಳೆಂದು ಲಾಯರೂ ಹೇಳಿದರು.

ಗಂಡನನ್ನು ಕಾಪಾಡಲು ಅವಳಿಗೂ ಇಷ್ಟವೇ. ಆದರೆ ತಾನು ಮಾಡಿದುದನ್ನು ಒಪ್ಪಿಕೊಳ್ಳಬೇಕೆಂದೆಣಿಸಿದಾಗ ಆವಳು ಬಹಳ ಹಿಂಜರಿದು ನಡುಗಿದಳು.

"ದೈವವು ದಾರಿ ಹೇಗೆ ತೋರಿಸುವುದೋ ಹಾಗೆ ಮಾಡುವೆನು" ಎಂದು ಕೊನೆಯಲ್ಲಿ ಲಕ್ಷ್ಮಿ ಹೇಳಿದಳು

"ಚಂಡಾಲೀ, ನಿನಗೆ ದೈವ ಬೇರೆ ಉಂಟೆ? ಹಳೆಯ ಜೋಡಿಂದ ಹೊಡೆಯಬೇಕು." ಎಂದು ಕರಿಯಣ್ಣನು ಕೂಗಿದನು.

ಅದಕ್ಕೆ ಅವಳು ನಡುಗಿ "ನೀವು ಹೇಳುವಂತೆಯೇ ಮಾಡುತ್ತೇನೆ. ಹೆಂಗಸಿನಿಂದೇನಾದೀತು?" ಎಂದಳು.

ಲಾಯರು ಬೇಡಿಕೊಂಡದ್ದೂ ಅದೇ. ಆ ಕ್ಷಣವೇ ಎಲ್ಲರನ್ನೂ ಹೋಗೆಂದು ಹೇಳಿ ಅವರು ಕರಿಯನ ಅಣ್ಣನೊಡನೆ ಗುಪ್ತವಾಗಿ ಮಾತಾಡತೊಡಗಿದರು.

ಮರುದಿನ ಲಕ್ಷ್ಮಿ ಕಚೇರಿ ಹೊರಗೆ ಒಂದು ಮರದಡಿಯಲ್ಲಿ ಮತ್ತೆ ಕೆಲವರೊಡನೆ ಬಹಳ ಹೊತ್ತು ಕಾದಿದ್ದಳು. ಕೊನೆಯಲ್ಲಿ ಅವಳ ಹೆಸರನ್ನು ಯಾವನೋ ಒಬ್ಬನು ಘಟ್ಟಿಯಾದ ಸ್ವರದಿಂದ ಕೂಗಿದನು. ಲಕ್ಷ್ಮಿಯು ಬೆಚ್ಚಿಬಿದ್ದು ಎದ್ದಳು. ಅವಳನ್ನು ಕೂಗಿದ ಆಳೇ ಬಂದು ಅವಳನ್ನು ಕರೆದು

ಕೊಂಡು ಹೋದನು. ಪದ್ಧತಿಯಂತೆ ಸಾಕ್ಷಿಗಳು ನಿಲ್ಲುವ ಗೂಡಿನಲ್ಲಿ ಇವಳೂ ನಿಂತಳು. ಅವಳು ಅಲ್ಲಿ ನೋಡಿದುದೆಲ್ಲವೂ ಅವಳನ್ನು ಬೆರಗಿನಲ್ಲಿ ಮುಚ್ಚಿಟ್ಟವು. ಕೋರ್ಟು ಹಜಾರದ ಪಶ್ಚಿಮ ಭಾಗದಲ್ಲಿ ಅವಳ ದೃಷ್ಟಿಯು ಬಿದ್ದಾಗ, ಅಲ್ಲಿ ತನ್ನ ಗಂಡನು ಬೋನಿನಲ್ಲಿಟ್ಟ ಕಾಡು ಮೃಗದಂತೆ ಕಬ್ಬಿಣದ ಕಂಬಿಗಳ ಹಿಂದೆ ನಿಂತು ತನ್ನನ್ನು ದುರುಗುಟ್ಟಿ ನೋಡುವುದು ಅವಳಿಗೆ ಕಂಡಿತು. ಅವನ ತಲೆಯ ಕೂದಲು, ದಾಡಿ, ಮೀಸೆ ಅಧಿಕವಾಗಿ ಬೆಳದಿದ್ದರಿಂದ ಅವನ ಗುರುತನ್ನು ಯಾರೂ ಹಿಡಿಯಲಿಕ್ಕೆ ಆಗಲಿಲ್ಲ. ನೇಗಿಲನ್ನು ಹಿಡಿಯುವ ಒಬ್ಬ ಬಡ ಬೇಸಾಯಗಾರನನ್ನು ಎರಡು ತಿಂಗಳು ಸೆರೆಯಲ್ಲಿಟ್ಟರೆ ಅವನ ಮುಖವು ಕೊಲೆಪಾತಕ ಮುಖದಂತೆಯೇ ಆಗಿಬಿಡುವುದು

ಕೊನೆಯಲ್ಲಿ ಪ್ರಮಾಣ ಮಾಡಿದಳು. ಅನಂತರ ಅವಳಿಗೆ ಪ್ರಶ್ನೆಗಳನ್ನು ಹಾಕಿದರು. ಕೆಲವು ವೇಳೆ ಅವಳಿಗೆ ಪ್ರಶ್ನೆಗಳೇ ಅರ್ಥವಾಗಲಿಲ್ಲ. ತಾನು ಅಡಿಗೆ ಮಾಡುತ್ತಿದ್ದಾಗ ಇಸ್ಮೇಲನು ಬಂದು ತಕ್ಕುದಲ್ಲದ ಕೆಲಸವನ್ನು ಹೇಳಿದಂತೆಯೂ ತಾನು ಅದಕ್ಕೆ ಒಪ್ಪಲಿಲ್ಲವೆಂದೂ ಇಷ್ಟರೊಳಗೆ ತನ್ನ ಗಂಡನು ಕೋಪದಿಂದ ಒಳಕ್ಕೆ ಬಂದು ತನ್ನ ಮೇಲೆ ಹಾರೆಯನ್ನು ಎಸೆದ ಹಾಗೂ ತಾನು ಭಯಪಟ್ಟು ಓಡಿದ ಹಾಗೂ ಆಮೇಲೆ ನಡೆದುದು ತಿಳಿಯದೆಂತಲೂ ಇಸ್ಮೇಲನ ತಲೆಯಿಂದ ರಕ್ತ ಸುರಿಯುತ್ತಿದ್ದಾಗ ಮಾತ್ರ ಓಡಿದುದನ್ನು ನೋಡಿದ ಹಾಗೂ ಹೇಳಿ ಲಕ್ಷ್ಮಿಯು ತನ್ನ ಸಾಕ್ಷ್ಯವನ್ನು ಮುಗಿಸಿದಳು. ಅವಳು ಇಷ್ಟೇ ಹೇಳಬೇಕೆಂದು ಲಾಯರ ಮನೆಯಲ್ಲಿ ತೀರ್ಮಾನವಾಗಿತ್ತು.

'ಲೇ ಚಂಡಾಲೀ' ಎಂದು ಕರಿಯನು ಕೈದು ಇಟ್ಟಿದ್ದ ಗೂಡಿನಿಂದ ಕೂಗಿದನು. ತಾನು ನಂಜರಾಜಪುರದಲ್ಲಿದ್ದ ಹಾಗೆ ಸಾಕ್ಷಿ ಹೇಳಲ್ಪಡುವುದೆಂದು ಈ ದಿನವೂ ನಂಬಿದ್ದನು. ಅವನ ಲಾಯರು ಅವನ ಬಳಿಗೆ ಹೋಗಿ ಏನೋ ರಹಸ್ಯವಾಗಿ ಒಂದು ಮಾತನ್ನು ಕಿವಿಯಲ್ಲಿ ಹೇಳಿದರು. ಇದರಿಂದ ಅವನು ಸಮಾಧಾನ ಹೊಂದಿದನು. 'ಅಸೆಸರ್ಸ್' (ನ್ಯಾಯಸ್ಥಾನದ ಪಂಚಾಯಿತರು) ಗಳೂ, ಕರಿಯನು ಖೂನಿ ಮಾಡಲು ಪ್ರಯತ್ನಪಟ್ಟನೆಂಬಭಿಪ್ರಾಯ ನಿರೂಪಿಸಲ್ಪಡಲಿಲ್ಲವೆಂದೂ ಬಹಳ ರೇಗಿಸಲ್ಪಟ್ಟಿದ್ದರಿಂದ ಬಲವಾದ ಘಾಯ ಮಾಡಿದನೆಂದೂ ಅಭಿಪ್ರಾಯವನ್ನು ಕೊಟ್ಟರು.

ನ್ಯಾಯಾಧೀಶರು ಮುಂದಿನ ದಿನಕ್ಕೆ ಮೊಕದ್ದಮೆಯನ್ನು ತಳ್ಳಿದರು. ಮರುದಿನ ಕೋರ್ಟಿಗೆ ಬಂದ ಕೂಡಲೇ ತೀರ್ಮಾನವು ಹೇಳಲ್ಪಟ್ಟಿತು. ನ್ಯಾಯಾಧೀಶರು ಅಸೆಸರುಗಳ ಅಭಿಪ್ರಾಯಗಳಿಗೆ ಒಡಂಬಡದೆ, ಕರಿಯನು ಖೂನಿ ಮಾಡಲು ಪ್ರಯತ್ನಪಟ್ಟನೆಂದು ಹೇಳಿದರು.

ನ್ಯಾಯಾಧೀಶರು, ಖಾದರ್ ಖಾನ್ ಮತ್ತು ಇಸ್ಮೇಲನು ಹೇಳಿದ ಸಾಕ್ಷ್ಯವನ್ನೊಪ್ಪಿಕೊಂಡು ಅವರಿಬ್ಬರೂ ಕರಿಯನಿಂದ ಕಂತು ಹಣವನ್ನು ಕೇಳಲು ಹೋಗಿದ್ದರೆಂದೂ ಕುಡುಕನಾದ ಅಪರಾಧಿಯು ಕೋಪಿಸಿಕೊಂಡು ಅವರನ್ನು ಹೊಡೆದ ಹಾಗೂ ಖಾದರ್ ಖಾನನೂ ಅವನ ಮಗನೂ ಅದೃಷ್ಟ ವಶಾತ್ ಹಾಗೂ ಜನಗಳು ಬಂದು ಬಿಡಿಸಿದುದರಿಂದ ಪ್ರಾಣವನ್ನುಳಿಸಿಕೊಂಡರೆಂದೂ ಅಭಿಪ್ರಾಯಪಟ್ಟರು. ಕರಿಯನ ಹೆಂಡತಿಯು ತನ್ನ ಗಂಡನಿಗೆ ಅನುಕೂಲವಾಗಿ ಸಾಕ್ಷಿಹೇಳುವುದು ಸಹಜವೆಂತಲೂ ಮತ್ತು ಪೋಲೀಸಿನವರ ಮುಂದೆಯೂ ಮ್ಯಾಜಿಸ್ಟ್ರೇಟರ ಮುಂದೆಯೂ ಅವಳು ಬೇರೆ ಬೇರೆ ರೀತಿಯಾಗಿ ಹೇಳಿರುವುದರಿಂದ ಅವಳ ಸಾಕ್ಷಿಯನ್ನು ನಂಬಲಾಗದೆಂದು ಸೂಚಿಸಿ ತೀರ್ಮಾನ ಮಾಡಿ ಆರು ವರ್ಷ ಕಠಿಣ ಸಜಾ ವಿಧಿಸಿದರು. ಲಕ್ಷ್ಮಿಯ ಮೇಲೆ ಸುಳ್ಳು ಸಾಕ್ಷ್ಯ ಹೇಳಿದ್ದಕ್ಕಾಗಿ ಮೊಕದ್ದಮೆಯನ್ನು ನಡೆಸಲು ಅನುಮತಿಯನ್ನು ಪಡೆಯುವ ಯೋಚನೆ ಮಾಡಬಹುದೆಂದು ಅವರು ಸರ್ಕಾರದ ಲಾಯರಿಗೆ ಶಿಫಾರಸು ಮಾಡಿದರು.

ಕರಿಯನು ಶಿಕ್ಷೆಯನ್ನು ಕೇಳಿದ ಕೂಡಲೆ 'ಚಂಡಾಲಿ ಮೋಸ ಮಾಡಿಬಿಟ್ಟಳು. ಕೈಹಿಡಿದ ಹೆಂಡತಿಯು ದ್ರೋಹ ಮಾಡಿದಾಗ, ಸ್ವಾಮಿ, ನೀವು ಹೇಳಿ, ಗಂಡನು ನೋಡಿಕೊಂಡಿರುವುದೆ?' ಎಂದು ಕೂಗಿದನು.

'ಅವನನ್ನು ಕರೆದುಕೊಂಡು ಹೋಗಿರಿ' ಎಂದರು ನ್ಯಾಯಾಧೀಶರು.

ಪೋಲೀಸ್ ಜವಾನರು ಅವನನ್ನು ತಳ್ಳಿಕೊಂಡು ಹೋದರು. 'ನೀನು ಹೇಳುವುದೆಲ್ಲವನ್ನೂ ಬರೆದು ಚೀಫ್ ಕೋರ್ಟಿಗೆ ಅಪೀಲ್ ಮಾಡಬಹುದು' ಎಂದು ಅವನಿಗೆ ಸಮಾಧಾನ ಹೇಳಿದರು.

## ೧೦. ಬಿಡುಗಡೆ

ವಿಚಾರಣೆ ಮುಗಿದ ಕೂಡಲೆ ಲಕ್ಷ್ಮಿಯನ್ನು ಅವಳ ಬಂಧುಗಳಾರೂ ಗಮನಿಸಲಿಲ್ಲ. ಬಹಳ ಪ್ರಯಾಸದಿಂದ ರಾಮಾಪುರಕ್ಕೆ ಹೋಗಿ ಸೇರಿದಳು. ವಯಸ್ಸಾದ ಆ ಮುಸಲ್ಮಾನ ಕಾನ್ಸ್ಟೇಬಲನು ಅವಳ ಮೇಲೆ ಪಶ್ಚಾತ್ತಾಪ ಪಟ್ಟು ಅವಳ ಜೊತೆಯಲ್ಲೇ ಹೋದನು.

'ಮೊದಲೇ ನೀನು ನಿಜವನ್ನು ಹೇಳಬೇಕಾಗಿತ್ತು. ಮೊದಲು ನೀನು ಕೋರ್ಟಿನಲ್ಲಿ ನಿಜವನ್ನು ಹೇಳದ್ದರಿಂದ ನಿನ್ನನ್ನು ನ್ಯಾಯಾಧೀಶರು ನಂಬ ಲಿಲ್ಲ. ಇಲ್ಲಿಯೂ ನಿಜವನ್ನು ಸಂಪೂರ್ಣವಾಗಿ ಹೇಳಲಿಲ್ಲ.' ಎಂದನು ಆ ಮುಸಲ್ಮಾನನು.

ಅವನ ಮಾತುಗಳು ಅವಳ ಕಿವಿಯ ಮೇಲೆ ಬಿದ್ದರೂ ಅವಳಿಗೆ ಅರ್ಥ ವಾಗಲಿಲ್ಲ. ಅವಳಿಗೆ ಇಷ್ಟು ಹೊತ್ತಿಗೆ ಹುಚ್ಚು ಹಿಡಿದಂತಾಗಿತ್ತು. ಬಹಳ ಹೊತ್ತಾದಮೇಲೆ ರಾತ್ರಿ, ರಾಮಾಪುರವನ್ನು ಸೇರಿದರು. ಆ ಕಾನ್ಸ್ಟೇಬಲನು ತನ್ನ ಮನೆಯ ಹೊರಗಿನ 'ವರಾಂಡ'ದಲ್ಲಿ ಮಲಗಿದ್ದನು. ಬೆಳಗಾದಮೇಲೆ ಅಣ್ಣನ ಊರಿಗೆ ಹೋಗಬಹುದೆಂದು ಹೇಳಿದನು.

ಅವಳಿಗೆ ನಿದ್ದೆ ಬರಲಿಲ್ಲ. ಅತ್ತಿಗೆಯ ಮುಖವನ್ನು ಮತ್ತೊಂದು ಸಲ ಹೇಗೆ ನೋಡುವುದು ? ಎಲ್ಲವೂ ಆಗಿಹೋಯಿತು. ದೇವರೂ ಕೈಬಿಟ್ಟಿ ರುವನು. ಇನ್ನು ಈ ದುಃಖದ ಬಾಳಿಗೆ ಸಮಾಪ್ತಿಯನ್ನೆದುರು ನೋಡಬೇಕು ಪ್ರಾಣಬಿಡುವುದೊಂದೇ ಉಳಿದಿರುವುದು. ಒಳ್ಳೆಯ ಸಮಯ; ಕಷ್ಟಗಳಿಂದ ತಪ್ಪಿಸಿಕೊಳ್ಳಲು ಆ ದಾರಿಯಾದರೂ ಇರುವುದಲ್ಲ! ಅದನ್ನು ಯಾರು ಅಪಹರಿಸುವರು ?

ಬಹಳ ಹೊತ್ತು ಅವಳಿಗೆ ನಿದ್ರೆ ಬರಲಿಲ್ಲ. ಬೆಳಗಿನ ಝಾಮದಲ್ಲಿ ಗಾಢನಿದ್ರೆ ಹತ್ತಿತು. ಬೆಳಿಗ್ಗೆ ಆರು ಗಂಟೆಗೆ ಆ ಸಾಹೇಬನು ಎದ್ದುಬಂದು ಅವಳು ಮೈಮರೆತು ನಿದ್ದೆ ಹೋಗುತ್ತಿರುವುದನ್ನು ನೋಡಿ 'ಗಂಡನನ್ನು ಜೈಲಿಗೆ ಕಳುಹಿಸಿ ಬಂದ ಈ ಹೆಣ್ಣುಮಗಳು ಆನಂದವಾಗಿ ನಿದ್ದೆಹೋಗಿರು ವಳು. ಈ ಮೋಸಗಾರರಾದ ಹೆಂಗಸರನ್ನು ನಂಬುವವರು ಬುದ್ಧಿಯಿಲ್ಲದ ವರು' ಎಂದುಕೊಂಡನು.

ಮಗು ಅಳುವ ಧ್ವನಿಯನ್ನು ಕೇಳಿ ಲಕ್ಷ್ಮಿಯು ಎದ್ದಳು. ತನ್ನ ಮಗುವು ಏನೋ ಕಾಯಿಲೆಯಿಂದ ಅಳುತ್ತಿರುವುದನ್ನು ಸ್ವಪ್ನದಲ್ಲಿ ಕಂಡಳು. ಎದ್ದ ಮೇಲೆ, ತನ್ನ ಮಗುವು ಸತ್ತು ಬಹಳ ಕಾಲವಾಯಿತೆಂದೂ ತಾನು ಈಗ ಗಂಡ, ಮನೆ, ಬಾಗಿಲುಗಳನ್ನು ಕಳೆದುಕೊಂಡ ಅನಾಥಳೆಂದೂ ತಿಳಿದುಕೊಳ್ಳುವುದು ಸ್ವಲ್ಪ ಹೊತ್ತಾಯಿತು.

ಅವಳು ಎದ್ದು ಕೂತಳು. ಅವಳೆದುರಿಗೆ ಬಹಳ ಕಪ್ಪಾದ ಒಬ್ಬ ಹುಡುಗನು ನಿಂತಿದ್ದನು. ಅವನು ಕೈಯಿಂದ ಬಾಯನ್ನು ಮುಚ್ಚಿಕೊಂಡು ಕೂಸು ಅಳುವಂತೆ ಧ್ವನಿ ಮಾಡಿದನು. ಅನಂತರ ಆ ಧ್ವನಿಯನ್ನು ನಿಲ್ಲಿಸಿ ಮಗುವಿನ ತಾಯಿ ಮಾತಾಡುವಂತೆ ಮಾಡಿದನು. ಈ ರೀತಿಯಾಗಿ ಧ್ವನಿಯನ್ನು ಬದಲಾಯಿಸುತ್ತ ತಮಾಷೆ ಮಾಡುತ್ತಿದ್ದವನು ಲಕ್ಷ್ಮಿಯನ್ನು ನೋಡಿ "ಒಂದು ಕಾಸು ಕೊಡು ತಾಯೀ!'' ಎಂದು ಹೇಳಿದನು.

"ಅಪ್ಪಾ! ನಿನ್ನ ಮನೆಯೆಲ್ಲಿ?" ಎಂದು ಕೇಳಿದಳು ಲಕ್ಷ್ಮಿ.

"ಒಂದು ಕಾಸು ಕೊಡು ತಾಯೀ!'' ಎಂದು ಮತ್ತೆ ಕೇಳಿದನು.

"ನಿನ್ನ ತಂದೆ ಯಾರು?" ಎಂದು ಲಕ್ಷ್ಮಿ ಕೇಳಿದಳು.

"ತಿಳಿಯದು" ಎಂದನು ಹುಡುಗ.

ನಿನ್ನ 'ತಾಯಿ ಯಾರು?'

'ನನ್ನ ತಾಯಿಯಿದ್ದಾಳೆ. ನನ್ನನ್ನು ಹಂದಿ ಕಾಯುವವರೊಡನೆ ಬಿಟ್ಟು ಹೋಗಿದ್ದಾಳೆ'—ಎಂದನು ಆ ಹುಡುಗನು.

'ನಿನಗೆ ಅನ್ನ ಯಾರು ಹಾಕುತ್ತಾರೆ?'

'ನಾನೇ ಸಂಪಾದಿಸಿ ಊಟ ಮಾಡುತ್ತೇನೆ. ಕಾಸು ಸೇರಿಸಿ ಹಂದಿ ಕಾಯುವವನ ಹತ್ತಿರ ಕೊಡುತ್ತೇನೆ. ಕೆಲವು ವೇಳೆ ಅವನು ನನಗೆ ಅನ್ನ ಹಾಕುತ್ತಾನೆ. ಆ ಮೇಲೆ ಹಣ ಸೇರಿಸಿ ನನಗೆ ಕೊಟ್ಟುಬಿಡುತ್ತಾನೆ.' ಎಂದನು ಹುಡುಗ.

"ಮಗುವಿನಂತಳುವುದು ಎಲ್ಲಿ ಕಲಿತೆ?"

‘ಓ, ನಾನೂ ಇನ್ನೊಬ್ಬನೂ ಬೆಂಗಳೂರಲ್ಲಿ ಕಲಿತೆವು. ಏನಾದರೂ ಕೊಡು ತಾಯಿ. ನಾನು ಹಂದಿ ಕಾಯುವವರ ಬಳಿ ಹೋಗಬೇಕು’ ಎಂದನು.

ಇಷ್ಟರೊಳಗೆ ಆ ಮುಸಲ್ಮಾನ ಪೋಲೀಸರವನು ಬಂದು ಅವನನ್ನು ಹೆದರಿಸಿ ಓಡಿಸಿಬಿಟ್ಟನು. ‘ಇವರೇ ಕಳ್ಳ ಹುಡುಗರು. ಹೀಗೆ ಹೊಂಚು ಹಾಕಿಕೊಂಡು ಹೋಗಿ ರಾತ್ರಿ ಬಂದು ಕನ್ನ ಹಾಕುವರು. ನೀನು ರಾತ್ರಿ ಚೆನ್ನಾಗಿ ನಿದ್ದೆ ಹೋಗಿದ್ದಂತೆ ಕಾಣುವುದು’ ಎಂದು ಕೇಳಿದನು.

“ದೇವರು ನಿಮ್ಮನ್ನು ಕಾಪಾಡಲಿ. ನೀವು ನನಗೆ ತಂದೆಯಂತಿದ್ದೀರಿ.” ಎಂದು ಲಕ್ಷ್ಮಿ ಹೇಳಿ ಕಣ್ಣೀರು ಸುರಿಸಿದಳು. ಈಗ ಅವನ ಮನಸ್ಸು ಸ್ವಲ್ಪವೂ ಕರಗಲಿಲ್ಲ. ಅವಳು ಬೂಟಾಟಿಕೆ ಮಾಡುತ್ತಿರುವಳೆಂದು ತಿಳಿದನು !

ಮಟ ಮಟ ಮಧ್ಯಾಹ್ನ. ಬಹಳ ಹಸಿವೆಯಿಂದಲೂ ಸಂಕಟದಿಂದಲೂ ನರಳುತ್ತಿದ್ದ ಲಕ್ಷ್ಮಿ ಅಣ್ಣನ ಮನೆಯನ್ನು ಸೇರಿದಳು.

ಅತ್ತಿಗೆಯ ಮನಸ್ಸು ಸ್ವಲ್ಪ ಮೆತ್ತಗಾಗಿರಬಹುದೆಂದು ಲಕ್ಷ್ಮಿ ತಿಳಿದಿದ್ದಳು. ಆದರೆ ಅಕ್ಕಟಾ! ಮುಂಚೆಯೇ ಅವಳಿಗೆ ವರ್ತಮಾನವು ಹೋಗಿತ್ತು. ಅಣ್ಣನು ಜಮೀನಿಗೆ ಹೋಗಿದ್ದನು. ಅತ್ತಿಗೆಯು ಬಾಗಿಲಲ್ಲಿ ನಿಂತಿದ್ದಳು. ‘ಜಾತಿ ಕೆಟ್ಟವಳು’ ಎಂದಳು! ‘ನಿನ್ನ ಹಾಳು ದೇಹವನ್ನು ಇಲ್ಲಿಗೆ ತರಬೇಡ. ಗಂಡನನ್ನು ತಿಂದು ತುರುಕನ ಬಳಿ ಹೋದವರ ಪಾಲಿಗೆ ನಮ್ಮ ಮನೆಯು ಛತ್ರವೇನೂ ಅಲ್ಲ. ನನ್ನ ಮನೆಯಲ್ಲಿ ಕೂತು ಬುದ್ಧಿಯಿಲ್ಲದ ನನ್ನ ಗಂಡನ ರಕ್ತವನ್ನು ಹೀರುವೆಯೆಂದೆಣಿಸುವೆಯಾ ? ನನಗೆ ಮಕ್ಕಳು ಮರಿಗಳಿದ್ದಾರೆ. ನಿನ್ನ ಸಹವಾಸವು ಅವರಿಗೆ ಬೇಡ. ನೀನು ಯಾರನ್ನು ಮೋಸ ಮಾಡಿದೆಯೋ ಅಲ್ಲಿಗೇ ಹೋಗು. ಇಲ್ಲಿ ಜಾಗವಿಲ್ಲ.’’ ಎಂದಳು.

‘ಅಣ್ಣಾ ಅಣ್ಣಾ !’ ಎಂದು ಲಕ್ಷ್ಮಿ ಒದರಿದಳು. ಅಣ್ಣನು ಒಳಗಿರಬಹುದೆಂದು ಅವಳು ಭಾವಿಸಿದಳು.

‘ಮಾತಾಡಲೊಲ್ಲೆಯಾ ? ನೀನೂ ನನ್ನ ಕೈಯನ್ನು ಬಿಟ್ಟೆಯಾ ? ಇನ್ನು ಮೇಲೆ ನನಗೆ ದೇವರೇ ದಿಕ್ಕು !’ ಎಂದು ಹೇಳುತ್ತ ಬಿಕ್ಕಿ ಬಿಕ್ಕಿ

ಅತ್ತಳು. ಹಸಿವನ್ನೂ ಆಯಾಸವನ್ನೂ ಮುಂದೆ ತಳ್ಳುತ್ತಾ ಆ ಸ್ಥಳವನ್ನು ಬಿಟ್ಟು ಅಳುತ್ತಾ ಹೋದಳು.

ಬಿಸಿಲು ಕೆಂಡದಂತೆ ಸುಡುತ್ತಿತ್ತು. ಆದರೆ ಈಗ ಪ್ರಪಂಚದ ಯಾವ ಚಪಲವೂ ಅವಳಿಗೆ ಬೇಕಿರಲಿಲ್ಲ. ಬಾಯಾರಿಕೆಯಿಂದ ಒಣಗಿದ ಗಂಟಲೂ ತುಟಿಗಳೂ ಅವಳಿಗೆ ತಿಳಿದ ದೇವರ ಹೆಸರನ್ನು ಹೇಳಿದವು. ಪಕ್ಕದ ಗ್ರಾಮ ದಲ್ಲಿ ಒಂದು ಬೆಟ್ಟದ ಮೇಲೆ ಗುಡಿಯೊಂದಿತ್ತು. ಅದನ್ನು ಕುರಿತು ಹೊರ ಟಳು ಬೆಟ್ಟವನ್ನು ಸ್ವಲ್ಪ ದೂರ ಹತ್ತಿದ ಮೇಲೆ ಅವಳಿಗೆ ಒಂದು ಹೆಜ್ಜೆ ಯನ್ನಾದರೂ ಇಡಲಿಕ್ಕಾಗಲಿಲ್ಲ.

ಮೂರ್ಛೆ ಬಂದ ಹಾಗೆ ಆಗುತ್ತಿತ್ತು. ನೆರಳಲ್ಲಿ ಸ್ವಲ್ಪ ಕುಳಿತಳು. ಸ್ವಲ್ಪ ಹೊತ್ತಾದಮೇಲೆ ಎದ್ದು ಗುಡಿಯನ್ನು ಸೇರಿದಳು. ಆದರೆ ಒಳಕ್ಕೆ ಹೋಗಲಿಲ್ಲ. ಹೊರಗಿನಿಂದಲೇ ನಮಸ್ಕಾರ ಮಾಡಿ ಪ್ರಾರ್ಥಿಸಿದಳು. ಆಮೇಲೆ ಗುಂಡಿಗಿಂತಲೂ ಎತ್ತರವಾದ ಒಂದು ಬಂಡೆಯ ತುದಿಯನ್ನು ಹತ್ತಿದಳು. ಅದನ್ನು ಹತ್ತುವುದು ಕಷ್ಟವಾಗಿತ್ತು. ಆದರೆ ಅವಳಿಗೆ ಹೊಸ ಬಲವೊಂದು ಬಂದಿತ್ತು. ಹತ್ತಿ ತುದಿಯನ್ನು ಸೇರಿದಳು. ಪಶ್ಚಿಮದ ಕಡೆಯಿಂದ ಕೆಳಗೆ ನೋಡಿದಳು. ತುದಿಯಿಂದ ಕೆಳಗಿನವರೆಗೂ ಒಂದೇ ಬೆಟ್ಟ. ಅಗಾಧವಾದ ಹಳ್ಳ. ತಲೆ ಸುತ್ತಿತು. ಕೆಳಗೆ ಕುಳಿತಳು. ಮತ್ತೆ ಎದ್ದು "ಅಮ್ಮಾ ತಾಯೀ! ಕಾಳೀ, ನನ್ನ ಪಾಪಗಳೆಲ್ಲವನ್ನೂ ಕ್ಷಮಿಸು, ನನ್ನನ್ನು ನಿನ್ನ ಬಳಿಗೆ ಕರೆದುಕೊ'' ಎಂದು ಕೂಗುತ್ತಾ, ಒಂದೇ ನೆಗೆತ ದಲ್ಲಿ ಧುಮುಕಿದಳು.

ಆಹಾ! ಒಂದು ಕ್ಷಣದೊಳಗೆ ಆನಂದ! ಎಷ್ಟು ನೆಮ್ಮದಿ! ಭೂಮಿ ಯೂ ಆಕಾಶವೂ ಸುತ್ತಿದವು. ಆಹಾ! ಎಷ್ಟು ತಂಪು! ಎಷ್ಟು ಸುಖ! ಹಿಂದೆ ಎಂದೂ ಕೇಳದ ಒಂದು ದೊಡ್ಡ 'ಧಬಾರ್' ಎಂಬ ಶಬ್ದವು ತಲೆ ಯಿಂದ ಬಂದಿತು. ಅನಂತರ ಆಳವಾದ ಮೌನಸಾಗರದಲ್ಲಿ ಲಕ್ಷ್ಮಿಯ ಪ್ರಾಣವು ದುಃಖದ ಗೂಡಿನಿಂದ ತಪ್ಪಿಸಿಕೊಂಡು ಹಾರಿಹೋಯಿತು.

———

# ಜಗದೀಶ ಶಾಸ್ತ್ರಿಗಳ ಕನಸು

ರಂಗೂನ್ ಜಗದೀಶ ಶಾಸ್ತ್ರಿಗಳು ತಾವು ಹುಟ್ಟಿದ ಊರಾದ ತಿರುವಡ ಮರದೂರಿಗೆ ತಮ್ಮ ಐವತ್ತೆರಡನೆಯ ವಯಸ್ಸಿನಲ್ಲಿ ತಿರುಗಿ ಬಂದರು. ಅವರು ಮೊದಲು ಬ್ಯಾರಿಸ್ಟರ್ ಸುಬ್ಬಯ್ಯರವರ ಅಡಿಗೆಯವರಾಗಿ ರಂಗೂನಿಗೆ ಹೋದರು. ಕೆಲವು ದಿನಗಳಾದ ಮೇಲೆ ಅಡಿಗೆಯ ಕೆಲಸವನ್ನು ಬಿಟ್ಟು ರಂಗೂನಿನಲ್ಲಿ ವಾಸವಾಗಿದ್ದ ಬ್ರಾಹ್ಮಣರಿಗೆ ಪೌರೋಹಿತ್ಯ ಮಾಡಿಸಲು ತೊಡಗಿದರು. ಪುರೋಹಿತರ ವಂಶದಲ್ಲಿ ಹುಟ್ಟಿದವರಾದುದರಿಂದ ಅವರಿಗೆ ಸ್ವಲ್ಪ ಮಂತ್ರಗಳು ತಿಳಿದಿದ್ದವು. ತಿಳಿಯದ ಮಂತ್ರಗಳಿಗೆ ಅಚ್ಚು ಹಾಕಿದ ಪುಸ್ತಕಗಳನ್ನು ಕೊಂಡಿಟ್ಟುಕೊಂಡು ನಿರ್ವಾಹ ಮಾಡಿಕೊಳ್ಳುತ್ತಿದ್ದರು.

ಪರಿಚಾರಿಕೆ, ಅಡಿಗೆ, ವೈದಿಕವೃತ್ತಿ—ಇವುಗಳಿಂದ ಸಂಪಾದಿಸಿದುದನ್ನು ಬಡ್ಡಿಗೆ ಹಾಕಿ ವೃದ್ಧಿ ಮಾಡುತ್ತ ಬಂದುದರಿಂದ ಕಾಲಕ್ರಮದಲ್ಲಿ ಹಣವಂತರಾದರು. ಅವರ ಹತ್ತಿರ ಒಂದು ಲಕ್ಷ ರೂಪಾಯಿವರೆಗೂ ಇತ್ತೆಂದು ಜನಗಳು ಹೇಳಿಕೊಳ್ಳುತ್ತಿದ್ದರು.

ರಂಗೂನಿನಲ್ಲಿದ್ದ ಸಮಯದಲ್ಲಿ ಶಾಸ್ತ್ರಿಗಳು ಮದುವೆ ಮಾಡಿಕೊಳ್ಳಬೇಕೆಂದು ಆಶಿಸಿದ್ದು ಉಂಟು. ಆದರೆ ಈ ಆಶೆ ಕೈಗೂಡಲಿಲ್ಲ. ಈಗ ವಯಸ್ಸು ಮೀರಿದ್ದರಿಂದ ಆ ಯೋಚನೆಯನ್ನು ಬಿಟ್ಟರು. ತಿರುವಡಮರದೂರಲ್ಲಿ ಸ್ವಲ್ಪ ಜಮೀನನ್ನು ಕೊಂಡುಕೊಂಡು ತಮ್ಮ ಮುಂದಣ ಕಾಲಕ್ಕಾಗಿ ಯಾರೊಬ್ಬ ಹುಡುಗನನ್ನು ಸ್ವೀಕಾರ ಮಾಡಿಕೊಂಡು ತಮ್ಮ ಬಾಳನ್ನು ಕಳಿಯಬೇಕೆಂದು ತೀರ್ಮಾನಿಸಿದರು. ಆದರೆ ಅವರು ಸ್ವಂತ ಊರಿಗೆ ಬಂದ ವರ್ಷದಲ್ಲಿ ಮಹಾಮಾಘಕ್ಕಾಗಿ ಕುಂಭಕೋಣಕ್ಕೆ ಹೋಗಿದ್ದಾಗ ನಡೆದ ಒಂದು ಘಟನೆ ಅವರ ಬಾಳಿನಲ್ಲಿ ಒಂದು ದೊಡ್ಡ ಮಾರ್ಪಾಟನ್ನು ಮಾಡಲು ಕಾರಣವಾಯಿತು.

ಜಗದೀಶ ಶಾಸ್ತ್ರಿಗಳು ಇಳಿದುಕೊಂಡಿದ್ದ ಮನೆಯಲ್ಲಿ ಅವರಂತೆಯೇ ಮಹಾಮಾಘ ಸ್ನಾನಕ್ಕೆಂದು ಬಂದ ನಾಗೇಶ್ವರಯ್ಯರೂ ಅವರ ಮೂರು

ಗಂಡು ಮಕ್ಕಳೂ ಇಳಿದುಕೊಂಡಿದ್ದರು. ವಿಚಾರಿಸಿದ್ದರಲ್ಲಿ ನಾಗೇಶ್ವರ ಯ್ಯರವರು ರತ್ನ ವ್ಯಾಪಾರಿಯೆಂದೂ, ಇನ್ಶೂರೆನ್ಸ್ ಕಂಪನಿಯಲ್ಲಿ ಏಜಂ ಟರಾಗಿರುವರೆಂದೂ ತಿಳಿದು ಬಂದಿತು. ಅವರ ಜನ್ಮ ಸ್ಥಳ ಉತ್ತರ ಆರ್ಕಾಟು ಜಿಲ್ಲೆಯಲ್ಲಿ. ಬಹಳ ಕಾಲ ತೆಲುಗು ದೇಶದಲ್ಲೂ ಅನಂತರ ಸ್ವಲ್ಪ ಕಾಲ ಕಲ್ಕತ್ತೆಯಲ್ಲೂ ವಾಸ ಮಾಡಿದರು. ಅವರ ಹುಡುಗಿಯರಲ್ಲಿ ದೊಡ್ಡ ವರಿಬ್ಬರಿಗೂ ಮದುವೆಯಾಗಿತ್ತು. ಕೊನೆಯ ಹುಡುಗಿಗೆ ಮದುವೆಯಾ ಗಿರಲಿಲ್ಲ. ಅವಳಿಗೆ ೧೪ ವರ್ಷವಾಗಿತ್ತು. ನೋಡಲು ಲಕ್ಷಣವಾಗಿದ್ದಳು. ಪಿಟೀಲು ಅದ್ಭುತವಾಗಿ ನುಡಿಸುವಳು. ಜಗದೀಶ ಶಾಸ್ತ್ರಿಗಳಿಗೆ ೫೨ ವರ್ಷ ವಾಗಿದ್ದರೂ ಒಳ್ಳೆಯ ಧೃಢಕಾಯರಾಗಿದ್ದರು. ಅವರನ್ನು ನೋಡಿದವರು ೩೮-೪೦ ವರ್ಷಕ್ಕೆ ಮೇಲೆ ಹೇಳಲಾರರೆಂದು ನಾಗೇಶ್ವರಯ್ಯರವರು ಅಭಿ ಪ್ರಾಯಪಟ್ಟರು. ಅಂತು ಮದುವೆ ಮಾತು ನಡೆಯಿತು,

ನಾಗೇಶ್ವರಯ್ಯರವರು ಇನ್ಶೂರೆನ್ಸ್ ಕಂಪನಿಗೆ ಸಲ್ಲಬೇಕಾದ ಹಣ ವನ್ನು ಖರ್ಚು ಮಾಡಿಬಿಟ್ಟು ಅದನ್ನು ಭರ್ತಿಮಾಡುವುದಕ್ಕಾಗದೆ ಒದ್ದಾ ಡುತ್ತಿದ್ದ ಹಾಗೆ ತಿಳಿದುಬಂದಿತು. ಮೇಲೆ ಹೇಳಿದ ಬಾಕಿ ಹಣವನ್ನು ತೀರಿಸುವುದಕ್ಕಾಗಿ ಜಗದೀಶ ಶಾಸ್ತ್ರಿಗಳು ಅವರಿಗೆ ೬೦೦೦ ರೂಪಾಯಿ ಕೊಡಬೇಕೆಂದೂ ಮದುವೆಯನ್ನು ಯಾವ ಆರ್ಭಟವೂ ಇಲ್ಲದೆ ತಿರುಪತಿ ಯಲ್ಲಿ ತಕ್ಷಣವೇ ನಡೆಸಿಬಿಡಬೇಕೆಂದೂ ನಿಶ್ಚಯವಾಯಿತು. ಹಾಗೆಯೇ ಹಣವನ್ನೂ ಕೊಡಲಾಯಿತು. ಮದುವೆಯೂ ನಡೆಯಿತು. ನಾಗೇಶ್ವರ ಯ್ಯರವರು ಅವಸರದ ಕೆಲಸದಲ್ಲಿ ಕಲ್ಕತ್ತೆಗೆ ಹೊರಟುಹೋದರು. ಅನಂ ತರ ಅವರ ಕಡೆಯಿಂದ ಯಾವ ಸುದ್ದಿಯೂ ಇಲ್ಲದಿದ್ದುದು ಜಗದೀಶ ಶಾಸ್ತ್ರಿ ಗಳಿಗೆ ಸ್ವಲ್ಪ ಆಶ್ಚರ್ಯವನ್ನುಂಟುಮಾಡಿತು. ಆದರೆ ಅವರು ಆ ವಿಷಯಕ್ಕೆ ಹೆಚ್ಚು ಲಕ್ಷ್ಯ ಕೊಡಲಿಲ್ಲ. ತಮ್ಮ ಚಿಕ್ಕ ವಯಸ್ಸಿನ ಹೆಂಡತಿಯನ್ನು ಕರೆದುಕೊಂಡು ರಂಗೂನಿಗೆ ಹೋದರು.

೨

ಎರಡು ವರ್ಷಗಳೊಳಗಾಗಿ ಜಗದೀಶ ಶಾಸ್ತ್ರಿಗಳಿಗೆ ಒಬ್ಬ ಮಗನು ಹುಟ್ಟಿದನು. ಮುಪ್ಪಿನಲ್ಲಿ ಹುಟ್ಟಿದ ಮಗುವಾದುದರಿಂದ ಶಾಸ್ತ್ರಿಗಳು ಮಗ ನನ್ನು ಬಹಳ ಪ್ರೀತಿಯಿಂದ ಬೆಳೆಸಿದರು.

ಎರಡು ಮೂರು ವರ್ಷಗಳನಂತರ ಊರಲ್ಲಿ ತನ್ನ ಹೆಂಡತಿಯ ನಡತೆಯ ವಿಚಾರದಲ್ಲಿ ಮಾತು ಹುಟ್ಟಿತು. ಇದು ಶಾಸ್ತ್ರಿಗಳ ಕಿವಿಗೂ ಬಿದ್ದಿತು. ಅವರೂ ಅವರೇನನ್ನು ಮಾಡಲೂ ದಾರಿಯಿಲ್ಲದವರಾಗಿದ್ದರು. ಕೊನೆಯಲ್ಲಿ ಒಂದು ದಿನ ಶಾಸ್ತ್ರಿಗಳು ಮನೆಗೆ ಹಿಂತಿರುಗಿ ಬಂದವರು ಹೆಂಡತಿಯನ್ನು ಕಾಣಲಿಲ್ಲ. ಪಿಟೀಲನ್ನೂ, ಅವರು ಹಾಕಿದ್ದ ಒಡವೆಗಳನ್ನೂ, ಪೆಟ್ಟಿಗೆಯಲ್ಲಿದ್ದ ಹಣವನ್ನೂ ತೆಗೆದುಕೊಂಡು ಮುದುಕರನ್ನು ಪೇಚಾಟಕ್ಕೆ ಗುರಿಮಾಡಿ ಕಾಣದೆ ಹೋಗಿಬಿಟ್ಟಿದ್ದಳು.

ಹುಡುಗನಿಗೆ ಈಗ ಏಳು ವರ್ಷ. ಶಾಲೆಯಲ್ಲಿ ಓದುತ್ತಿದ್ದನು. ಅವನ ಓದು ಮೊದಲಾದ ವಿಷಯಗಳಲ್ಲಿ ಶಾಸ್ತ್ರಿಗಳು ಪೂರ್ತಿ ಆಸಕ್ತಿಯನ್ನು ತೋರಿಸಿದರು. ಹಿಂದಿನಂತೆ ಕೆಲವು ಮುಖ್ಯರಾದ ಸ್ನೇಹಿತರ ಮನೆಗಳಲ್ಲಿ ಪೌರೋಹಿತ್ಯ ಮಾಡಿಸುತ್ತಿದ್ದರು. ಹೀಗೆ ಸ್ವಲ್ಪ ಸ್ವಲ್ಪನಾಗಿ ಶಾಸ್ತ್ರಿಗಳು ತಮ್ಮ ದುಃಖಗಳನ್ನು ಮರೆತು ಕಾಲವನ್ನು ಕಳೆಯುತ್ತ ಬಂದರು.

ರಾಮಚಂದ್ರನು ಚೆನ್ನಾಗಿ ಓದಿ ೧೯ ನೆಯ ವರ್ಷದಲ್ಲಿ ಕಲ್ಕತ್ತಾ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದನು. ಅವನನ್ನು ಕರೆದುಕೊಂಡು ಶಾಸ್ತ್ರಿಗಳು ೧೯೩೦ ನೆಯ ಇಸವಿಯಲ್ಲಿ ಮತ್ತೆ ತಮ್ಮ ಸ್ವಂತ ದೇಶಕ್ಕೆ ಬಂದರು.

ಜಗದೀಶ ಶಾಸ್ತ್ರಿಗಳ ಸೋದರ ಮಾವನ ಮಕ್ಕಳೊಬ್ಬರು ಮೈಲಾಪುರದಲ್ಲಿ ಪ್ರಸಿದ್ಧಿಗೊಂಡ ವಕೀಲರಾಗಿದ್ದರು. ಅಡ್ವೊಕೇಟ್ ಜನರಲ್ ಸ್ಥಳ ಖಾಲಿಯಾದರೆ ಅವರಿಗೇ ಸಿಕ್ಕುವುದೆಂದು ಜನರು ಹೇಳಿಕೊಳ್ಳುತ್ತಿದ್ದರು. ಅವರ ಹೆಸರು ಸಿ. ವಿ. ಸೀತಾರಾಮಯ್ಯರ್. ಹಡಗಿನಿಂದಿಳಿದ ಜಗದೀಶ ಶಾಸ್ತ್ರಿಗಳು ಇವರ ಮನೆಯಲ್ಲಿ ಎರಡು ದಿನಗಳಿದ್ದರು. ಸೀತಾರಾಮಯ್ಯರವರ ಹೆಂಡತಿ ರಾಮಚಂದ್ರನನ್ನು ನೋಡಿದಳೋ ಇಲ್ಲವೋ ತನ್ನ ಮಗಳಾದ ಪಾರ್ವತಿಯನ್ನು ಅವನಿಗೇ ಕೊಡಬೇಕೆಂದು ತೀರ್ಮಾನಿಸಿಕೊಂಡಳು. "ಇದಕ್ಕಿಂತಲೂ ಉತ್ತಮ ವರನು ಎಲ್ಲಿ ಸಿಗುವಂತಿದೆ? ಹುಡುಗನಿಗೆ ಬಿ. ಎ. ಆಗಿದೆ. ಐ. ಸಿ. ಎಸ್. ಪರೀಕ್ಷೆಗೆ ವಿಲಾಯಿತಿಗೆ ಕಳುಹಿಸಬಹುದಲ್ಲ?'' ಎಂದು ಸೀತಾರಾಮಯ್ಯರೊಡನೆ ಅವರ ಹೆಂಡತಿ

ಹೇಳಿದಾಗ ಅವರಿಗೂ ಹಿತವಾಗಿಯೇ ತೋರಿತು. ಶಾಸ್ತ್ರಿಗಳಿಗೆ ಈ ವಿಷಯವನ್ನು ತಿಳಿಸಿದರು. ಅವರಿಗೂ ಸಮ್ಮತವೇ. ಆದರೆ ಒಂದೇ ಒಂದು ತೊಡಕಿತ್ತು. ಹೊಸದಾಗಿ ಬಂದಿದ್ದ ಶಾರದಾ ಶಾಸನವೇ ಈ ತೊಡಕು. ಹೆಣ್ಣಿಗೆ ಹನ್ನೊಂದೇ ವರ್ಷವಾದುದರಿಂದ ಈ ಶಾಸನವನ್ನು ಮೀರದೆ ಮದುವೆಯನ್ನು ನಡೆಯಿಸಲು ಸಾಧ್ಯವಿಲ್ಲ. ಅಡ್ವೊಕೇಟ್ ಜನರಲ್ ಸ್ಥಳವನ್ನು ನಿರೀಕ್ಷಿಸುತ್ತಿದ್ದವರೊಬ್ಬರು ಶಾಸನಕ್ಕೆ ವಿರೋಧವಾಗಿ ವರ್ತಿಸಲಾಗುವುದೇ ?

ಆದರೆ ಸೀತಾರಾಮಯ್ಯರ ಹೆಂಡತಿಗೆ ಇಷ್ಟು ಉತ್ತಮನಾದ ಅಳಿಯನು ಕೈಜಾರಿ ತಪ್ಪಿಹೋಗುವುದು ಇಷ್ಟವಿರಲಿಲ್ಲ. ಮದುವೆ ಈಗಲೇ ಆಗದಿದ್ದರೂ ಒಂದು ಪತ್ರದ ಮೂಲಕ ನಿಶ್ಚಿತಾರ್ಥವನ್ನು ಮಾಡಿಬಿಡಬೇಕೆಂದು ಒತ್ತಾಯ ಪಡಿಸಿದಳು. ಹಾಗೆಯೇ ಸೀತಾರಾಮಯ್ಯರವರು ತಮ್ಮ ಖರ್ಚಿನಲ್ಲಿ ಹುಡುಗನನ್ನು ಐ. ಸಿ. ಎಸ್. ಪರೀಕ್ಷೆಗೆ ವಿಲಾಯಿತಿಗೆ ಕಳುಹಿಸಬೇಕೆಂದೂ ಮೂರು ವರ್ಷಗಳಾದ ಮೇಲೆ ಮದುವೆಯಾಗಬೇಕೆಂದೂ ತೀರ್ಮಾನವಾಯಿತು. ಹುಡುಗಿ ಕಪ್ಪಾಗಿದ್ದುದರಿಂದ ಹುಡುಗನಿಗೆ ಮಾತ್ರ ಅಷ್ಟು ತೃಪ್ತಿಯಿರಲಿಲ್ಲ. ಆದರೆ ತಂದೆಯ ಮಾತನ್ನು ಗೌರವಿಸಿಯೂ ವಿಲಾಯಿತಿಗೆ ಹೋಗಲು ಆಸೆಯಿದ್ದುದರಿಂದಲೂ ಅವನು ಆಕ್ಷೇಪಿಸಲಿಲ್ಲ.

೩

ರಾಮಚಂದ್ರನು ವಿಲಾಯಿತಿಗೆ ಪ್ರಯಾಣ ಮಾಡಿದ ಮೇಲೆ ಜಗದೀಶ ಶಾಸ್ತ್ರಿಗಳು ಮತ್ತೆ ರಂಗೂನಿಗೆ ಹಿಂತಿರುಗಿದರು. ಆದರೆ ಈ ಸಲ ಅಲ್ಲಿ ಅವರ ಮನಸ್ಸು ನೆಮ್ಮದಿಯಾಗಿರಲಿಲ್ಲ. ಮಗನ ವಿಷಯವಾಗಿಯೂ ಓಡಿಹೋದ ಹೆಂಡತಿಯ ವಿಷಯವಾಗಿಯೂ ಆಗಾಗ್ಗೆ ಜ್ಞಾಪಿಸಿಕೊಳ್ಳುತ್ತಿದ್ದರು.

ಮನಶ್ಶಾಂತಿಯಿಲ್ಲದ್ದರಿಂದ ದೇಹದಾರ್ಢ್ಯವೂ ಕಡಿಮೆಯಾಯಿತು. ಮೈಯಲ್ಲಿ ಏನೋ ವ್ಯಾಧಿಯಿರಬೇಕೆಂದು ಡಾಕ್ಟರನ್ನು ಕೇಳಿದರು. ಯಾವ ಜಾಡ್ಯವೂ ಇಲ್ಲವೆಂದೂ ಆದರೆ ಸ್ವಂತ ದೇಶಕ್ಕೆ ಹಿಂತಿರುಗುವುದು ಒಳ್ಳೆಯ

ದೆಂದೂ ಡಾಕ್ಟರು ಹೇಳಿದರು. ಶಾಸ್ತ್ರಿಗಳಿಗೂ ಇದು ಸರಿಯೆಂದು ತೋರಿದು ದರಿಂದ ಕೊನೆಯ ಸಲ ರಂಗೂನನ್ನು ಬಿಟ್ಟು ತಮ್ಮ ದೇಶಕ್ಕೆ ಬಂದರು.

ಹಡಗಿನಲ್ಲಿ ನಿರೀಕ್ಷಿಸದ ಒಂದು ಘಟನೆ ಸಂಭವಿಸಿತು. ಎರಡನೆಯ ಕ್ಲಾಸಿನಲ್ಲಿ ಪ್ರಯಾಣ ಮಾಡುತ್ತಿದ್ದ ಒಬ್ಬ ಹೆಂಗಸು ಓಡಿಹೋಗಿದ್ದ ತನ್ನ ಹೆಂಡತಿಯ ಹಾಗೆ ಇದ್ದುದು ಅವರಿಗೆ ತೋರಿತು. ಸ್ವಲ್ಪ ವ್ಯತ್ಯಾಸವಿದ್ದು ದೇನೋ ನಿಜವೇ. ಆದರೆ ಅವಳು ಹೋಗಿ ಈಗ ೧೫ ವರ್ಷಗಳಾಗಿತ್ತಲ್ಲವೇ? ಮದರಾಸಿನ ಸಮೀಪಕ್ಕೆ ಬರುವುದರೊಳಗಾಗಿ ಆ ಹೆಂಗಸು ತನ್ನ ಹೆಂಡತಿ ಯಾಗಿಯೇ ಇರಬೇಕೆಂದು ಶಾಸ್ತ್ರಿಗಳು ಮುಕ್ಕಾಲು ಮೂರು ವೀಸ ಅಂಶ ನಿಶ್ಚಯಮಾಡಿಕೊಂಡರು. ಹಡಗು ರೇವಿಗೆ ಬಂದು ಸೇರಿತು. ಆ ಹೆಂಗಸು ತನ್ನ ಸಾಮಾನುಗಳೊಡನೆ ಇಳಿಯುವುದಕ್ಕೆ ಸಿದ್ಧವಾಗಿ ನಿಂತಾಗ ಜಗದೀಶ ಶಾಸ್ತ್ರಿಗಳು ಅವಳಿದುರಿಗೆ ಹೋಗಿ ನಿಂತರು. ಒಬ್ಬರನ್ನೊಬ್ಬರು ಒಂದು ಕ್ಷಣ ಕಾಲ ಎವೆಯಿಕ್ಕದೆ ನೋಡಿದರು. 'ಅಂಗಪ್ಪ ನಾಯಕನ ಬೀದಿ ೬೧ಳನೇ ನಂಬರು ಮನೆಯಲ್ಲಿ ನಾನಿರುವೆನು. ನನ್ನೊಡನೆ ಮಾತಾಡಬೇಕಾ ದರೆ ಅಲ್ಲಿ ಬನ್ನಿರಿ' ಎಂದು ಆ ಹೆಂಗಸು ಹೇಳಿದಳು. "ನೀನೇಯೇ? ನಾನೆ ಣಿಸಿದದು ಸರಿಯೇ" ಎಂದು ಶಾಸ್ತ್ರಿಗಳು ಹೇಳಿ ನಕ್ಕರು.

'ಹೌದು-ನಾನೇ' ಎಂದು ಅವಳೂ ನಕ್ಕಳು.

೪

ಶಾಸ್ತ್ರಿಗಳು ಬೀಗರಾದ ಸೀತಾರಾಮಯ್ಯರವರ ಮನೆಯಲ್ಲಿ ಬಹಳ ಉಪಚಾರಗಳನ್ನು ಮಾಡಿಸಿಕೊಂಡು ಸುಖವಾಗಿ ಎರಡು ದಿನಗಳಿದ್ದರು.

ತಮಿಳುನಾಡಿನಲ್ಲಿ ಪಂಚಮರಿಗೆ ಗುಡಿಗಳಲ್ಲಿ ಪ್ರವೇಶ ಕೊಡುವ ವಿಷಯವಾಗಿಯೇ ಮಾತುಕತೆ ನಡೆಯಿತು. "ಸನಾತನ ಧರ್ಮವು ಹೋ ಯಿತು" ಎಂದು ಸೀತಾರಾಮಯ್ಯರವರ ಮನೆಯಲ್ಲಿ ಮನೆಯಲ್ಲಿ ಎಲ್ಲರೂ ಹೇಳಿದರು ಶಾಸ್ತ್ರಿಗಳಿಗೂ ಹಾಗೆಯೇ ತೋರಿತು.

"ಶಾರದಾ ಶಾಸನ ಮಾಡಿದಾಗ ನೀವೆಲ್ಲರೂ ಏತಕ್ಕೆ ಸುಮ್ಮನಿದ್ದಿರಿ? ಅದರ ಫಲವೇ ಇದು" ಎಂದು ಸೀತಾರಾಮಯ್ಯರವರ ಹೆಂಡತಿ ಹೇಳಿದಳು.

"ಬೊಗಳಬೇಡ! ಅದಕ್ಕೂ ಇದಕ್ಕೂ ಏನು ಸಂಬಂಧ?" ಎಂದು ಸೀತಾರಾಮಯ್ಯರವರು ಕೇಳಿದರು. "ಎಲ್ಲಾ ಒಂದೇ. ಶಾಸ್ತ್ರಕ್ಕೆ ವಿರೋಧ ವಾಗಿ ನಡೆದರೆ ಅನಂತರ ಎಲ್ಲಕ್ಕೂ ಅವಕಾಶವಾಯಿತು" ಎಂದು ಅಮ್ಮ ನವರು ಹೇಳಿದರು.

"ಬಹಳ ನಿಜ" ಎಂದರು ಜಗದೀಶ ಶಾಸ್ತ್ರಿಗಳು. ಸೀತಾರಾಮಯ್ಯ ರವರಲ್ಲಿ ವಕೀಲಿ ಅಭ್ಯಾಸವನ್ನು ಮಾಡುತ್ತಿದ್ದವರೊಬ್ಬರು ಇದನ್ನು ಸಮ ರ್ಥಿಸಿದರು. "ಹೌದು. ನೀವು ಹಡಗಿನ ಮೇಲೆ ರಂಗೂನಿಗೆ ಹೋದಿರ ಲ್ಲವೇ? ಇದರಿಂದಲೂ ಎಲ್ಲಕ್ಕೂ ಅವಕಾಶವುಂಟಾಯಿತು" ಎಂದು ಅವರು ಮೆತ್ತಗೆ ಹೇಳಿದರು.

"ಇದೇನು ಸಂಬಂಧವಿಲ್ಲದ ಮಾತು? ಜೀವನೋಪಾಯಕ್ಕಾಗಿ ರಂಗೂನಿಗೆ ಹೋಗುವುದೂ ಗುಡಿಗಳಲ್ಲಿ ಹೊಲೆಯರನ್ನು ಬಿಡುವುದೂ ಒಂದೇನೇ?" ಎಂದು ಸೀತಾರಾಮಯ್ಯರವರು ಆಗ್ರಹದಿಂದ ಹೇಳಿದರು.

"ಶಾಸ್ತ್ರಗಳಲ್ಲಿ ನಾಲ್ಕು ವರ್ಣಗಳು ಮಾತ್ರವೇ ಅಲ್ಲವೇ ಹೇಳಿವೆ. ಐದನೇ ವರ್ಣವಿಲ್ಲವಲ್ಲಾ. ಈ ಜನರನ್ನು ನಾಲ್ಕನೆಯ ವರ್ಣದವರೆಂದು ಭಾವಿಸಿ ನಡೆದರೆ ಏನು ಮೋಸವಾದೀತು!" ಎಂದು ಸಣ್ಣ ವಕೀಲರು ಕೇಳಿದರು. ಜಗದೀಶ ಶಾಸ್ತ್ರಿಗಳು "ಇಂಗ್ಲೀಷು ಭಾಷಾಂತರಗಳನ್ನೋದಿ ಬಿಟ್ಟು ಶಾಸ್ತ್ರಗಳ ಪೂರ್ಣ ಪರಿಚಯವಾದ ಹಾಗೆ ಮಾತಾಡುತ್ತೀರಿ. ಆದಿ ಸೃಷ್ಟಿಯಲ್ಲಿ ನಾಲ್ಕು ವರ್ಣಗಳೇನೋ ನಿಜ. ಅನಂತರ ವರ್ಣಗಳು ಕಲೆತು ಹೋಗಿ ಸಂಕರ ಜಾತಿಗಳು ಉಂಟಾದವು. ಪ್ರತಿಲೋಮ ಸಂಬಂಧಗಳ ಫಲವಾಗಿ ಜಾತಿ ಚಂಡಾಲರು ಹುಟ್ಟಿದರು.

ಸಣ್ಣ ವಕೀಲರು "ಬ್ರಹ್ಮನ ಉದ್ದೇಶ ನಡೆಯದೇ ಹೋಯಿತೆಂದು ಕಾಣುತ್ತೆ. ಹೊಲೆಯ, ಮಾದಿಗ ಮುಂತಾದವರೆಲ್ಲರೂ ಕೆಟ್ಟುಹೋದ ಬ್ರಾಹ್ಮಣ ಸ್ತ್ರೀಯರ ಸಂತತಿಯವರೆಂದೇ ಹೇಳುತ್ತೀರಿ?"

ಶಾಸ್ತ್ರಿಗಳು "ಹಾಗೆಲ್ಲ ಕೆಣಕಿ ನೋಡಿದರೆ ಸರಿಹೋಗುವುದಿಲ್ಲ. ಅನೇಕ ಪರಂಪರೆಗಳಾಗಿ ಚಂಡಾಲರೆಂದು ಮಾಡಿಕೊಂಡು ಬಂದಿದ್ದೇವೆ. ಇದಕ್ಕೆಲ್ಲಾ

ಪ್ರಮಾಣಗಳನ್ನು ಕೇಳಬಾರದು. ನಾವು ಬ್ರಾಹ್ಮಣರೆನ್ನುವುದಕ್ಕೆ ಪ್ರಮಾಣ ವೇನು ? ”

ಇಷ್ಟರಲ್ಲಿ ಕೋರ್ಟಿಗೆ ಹೋಗಲು ಹೊತ್ತಾಯಿತು. ಈ ಸಭೆ ಮುಕ್ತಾಯವಾದ ಮೇಲೆ ಜಗದೀಶ ಶಾಸ್ತ್ರಿಗಳು ಅಂಗಪ್ಪನಾಯಕನ ಬೀದಿ ೬೧ಳನೇ ನಂಬರು ಮನೆಗೆ ಹೊರಟರು.

೫

ಆ ದಿನ ಸಾಯಂಕಾಲ ಜಗದೀಶಶಾಸ್ತ್ರಿಗಳು ಸೆಂಟ್ರಲ್ ಸ್ಟೇಷನಿನಲ್ಲಿ ಟಿಕೆಟ್ ತೆಗೆದುಕೊಳ್ಳುವ ಸ್ಥಳದಲ್ಲಿ ನಿಂತು ಕಾಶಿಗೆ ಟಿಕೆಟ್ ಕೇಳಿದರು. ಬೆಳಿಗ್ಗೆ ಅವರನ್ನು ನೋಡಿದ್ದಕ್ಕೆ ಈಗ ಹತ್ತು ವರ್ಷ ಹೆಚ್ಚಾಗಿ ಆದಂತೆ ಕಂಡಿತು.

“ ಕಾಶಿಗೆ ಯಾವ ಮಾರ್ಗವಾಗಿ ಹೋಗುತ್ತೀರಿ, ತಾತಾ ? ” ಎಂದು ಟಿಕೇಟು ಗುಮಾಸ್ತರು ಕೇಳಿದರು.

“ ಯಾವ ಮಾರ್ಗವಾದರೂ ಸರಿಯೇ. ಹತ್ತಿರವಾದ ಮಾರ್ಗವಾಗಿ ಕೊಡಿರಿ. ಶೀಘ್ರವಾಗಿ ಗಂಗೆಯಲ್ಲಿ ಸ್ನಾನಮಾಡಿ ಪಾಪಗಳನ್ನು ಹೋಗ ಲಾಡಿಸಿಕೊಳ್ಳುವೆನು ” ಎಂದರು ಶಾಸ್ತ್ರಿಗಳು

ಜಗದೀಶ ಶಾಸ್ತ್ರಿಗಳು ಅಂಗಪ್ಪನಾಯಕರ ಬೀದಿ ೬೧ಳನೇ ನಂಬರು ಮನೆಯಲ್ಲಿ ತಮ್ಮ ಹೆಂಡತಿಯನ್ನು ನೋಡಿ ತಿಳಿದುಕೊಂಡ ವಿವರಗಳು ಅವರಲ್ಲಿ ಅಷ್ಟು ವೈರಾಗ್ಯವನ್ನುಂಟುಮಾಡಿದವು.

ಜಗದೀಶ ಶಾಸ್ತ್ರಿಗಳ ಮಾವನಾದ ನಾಗೇಶ್ವರಯ್ಯರು ನಿಜವಾಗಿ ಬ್ರಾಹ್ಮಣರೂ ಅಲ್ಲ, ರತ್ನವ್ಯಾಪಾರಿಯೂ ಅಲ್ಲ. ಅವರ ನಿಜವಾದ ಹೆಸರು ಪರಿಯಾರಿನಾರ್ಗ. ಅಸಿಸ್ಟೆಂಟು ಅಕೌಂಟೆಂಟ್ ಜನರಲ್ ತ್ಯಾಗರಾಜಯ್ಯ ರವರು ಅವನನ್ನು ಕಲ್ಕತ್ತೆಗೆ ತಮ್ಮ ಜೊತೆಗೆ ಕರೆದುಕೊಂಡು ಹೋದರು. ಅಲ್ಲಿ ಅವನು ಸೆಲೂನಿಟ್ಟುಕೊಂಡು ಜೀವನ ಮಾಡುತ್ತಿದ್ದಾಗ ಅನಾಥ ಳೊಬ್ಬಳನ್ನಿಟ್ಟುಕೊಂಡಿದ್ದನು. ಅನಂತರ ಮೋಸದ ಕೆಲಸಗಳಲ್ಲಿ ಪ್ರವೇಶಿಸಿ ಕೆಟ್ಟುಹೋದನು. ಇವರಿಗೆ ಹುಟ್ಟಿದ ಹುಡುಗಿಯೇ ಜಗದೀಶ ಶಾಸ್ತ್ರಿಗಳ ಹೆಂಡತಿ. ನಾಗೇಶ್ವರಯ್ಯರೆನ್ನುವ ಪರಿಯಾರಿನಾಗನು ಜಗದೀಶ ಶಾಸ್ತ್ರಿಗಳ

ಮದುವೆಯಾದನಂತರ ಯಾವುದೋ ಒಂದು ಮೋಸಮಾಡಿದ್ದಕ್ಕಾಗಿ ಏಳು ವರ್ಷ ಶಿಕ್ಷೆಯನ್ನು ಹೊಂದಿ ಈಗ ಲಾಹೋರಿನ ಸೆರೆಮನೆಯಲ್ಲಿ ಖೈದಿಯಾಗಿದ್ದನು.

ಜಗದೀಶ ಶಾಸ್ತ್ರಿಗಳ ಹೆಂಡತಿ ರಂಗೂನಿನಲ್ಲಿ ಅವರನ್ನು ಬಿಟ್ಟು ಹೊರಟು ಹೋದ ಮೇಲೆ ಕೆಲವು ದಿನಗಳು ಅಲ್ಲಲ್ಲಿ ಅಲೆದು ಕೊನೆಯಲ್ಲಿ ಒಂದು ಸಿನಿಮಾ ಕಂಪೆನಿಯಲ್ಲಿ ಸೇರಿ ಬೇಕಾದಷ್ಟು ಹಣವನ್ನು ಸಂಪಾದಿಸುತ್ತ ಬಂದಳು. ತನಗೆ ಹಣಕ್ಕಾಗಿ ಯಾವ ಚಿಂತೆಯೂ ಇಲ್ಲವೆಂದೂ, ತಕ್ಕ ಮಟ್ಟಿಗೆ ಸಂತೋಷವಾಗಿಯೇ ಕಾಲಕಳೆಯುತ್ತಿರುವುದಾಗಿಯೂ, ಯಾವ ಸಹಾಯವೂ ಬೇಕಿಲ್ಲವೆಂದೂ ತಿಳಿಸಿದಳು.

"ನಾನೂ ನನ್ನ ತಂದೆಯೂ ಸೇರಿ ನಿಮ್ಮನ್ನು ಮೋಸಗೊಳಿಸಿದೆವು. ಭಗವಂತನೇ ನಮ್ಮನ್ನು ಕ್ಷಮಿಸಬೇಕು" ಎಂದಳು.

ಜಗದೀಶ ಶಾಸ್ತ್ರಿಗಳಿಗೆ ತಮ್ಮ ಸುಂದರಳಾದ ಹೆಂಡತಿಯ ವಿಷಯದಲ್ಲಿ ಪ್ರೀತಿ ಹೆಚ್ಚಿತು. ಮಗುವಿನಂತೆ ಅತ್ತರು. "ಈ ಹಾಳು ಜಾತಿಗಳನ್ನು ಯಾರು ಸೃಷ್ಟಿಸಿದ್ದು? ದೇವರು ಒಂದು ಕಾಲಕ್ಕೂ ಸೃಷ್ಟಿಸಿರಲಾರನು. ಹೋದುದೆಲ್ಲಾ ಹೋಗಲಿ. ನಾವು ಮತ್ತೆ ಈ ಊರನ್ನು ಬಿಟ್ಟು ರಂಗೂನಿಗೆ ಹೋಗಿ ಸೌಖ್ಯವಾಗಿರಬಹುದಲ್ಲಾ" ಎಂದರು.

"ಅಯ್ಯೋ! ಬೇಡ. ನಾನು ನಿಮ್ಮನ್ನು ಮುಟ್ಟುವುದಕ್ಕೆ ಕೂಡ ಅರ್ಹಳಲ್ಲ. ನಾನು ಕಟ್ಟಿಕೊಂಡಿರುವ ಪಾಪ ಹದಿನಾರು ತಲೆಗೂ ತೀರದು. ಕಾಶಿಗೆ ಹೋಗಿ ಗಂಗೆಯಲ್ಲಿ ಸ್ನಾನಮಾಡಿ ನನ್ನೊಡನೆ ಬಾಳುತ್ತಿದ್ದಾಗ ಗಳಿಸಿದ ಪಾಪವನ್ನು ತೀರಿಸಿಕೊಳ್ಳಿ" ಎಂದು ಶಾಸ್ತ್ರಿಗಳ ಹೆಂಡತಿ ಹೇಳಿದಳು. ಶಾಸ್ತ್ರಿಗಳು ಆ ಮನೆಯಿಂದ ಹೊರಗೆ ಬಂದಕೂಡಲೇ ಮಹಾ ಭಯಂಕರ ಸ್ಥಿತಿಯಲ್ಲಿದ್ದರು. ವಿಲಾಯಿತಿಯಲ್ಲಿ ಓದುತ್ತಿದ್ದ ತಮ್ಮ ಹುಡುಗನನ್ನು ನೆನಪುಮಾಡಿಕೊಂಡರು. ಕೆಲವು ತಿಂಗಳುಗಳಲ್ಲಿಯೇ ಅವನು ಹಿಂತಿರುಗುವನು. ಮದುವೆಯಾಗಬೇಕು. ಅವನೀ ದುರ್ಮಾರ್ಗ ಹೆಂಗಸಿಗೆ ಹುಟ್ಟಿದವನೆಂದು ತಿಳಿದದ್ದೇ ಆದರೆ ಏನು ಗತಿ! ಅವಳ ಜಾತಿಯೇನು? ಹುಡುಗನು ಯಾವ ಜಾತಿ? ಸೀತಾರಾಮಯ್ಯರವರೂ ಅವರ ಹೆಂಡತಿಯೂ ಏನನ್ನು ಹೇಳು

ವರು? ಶಾಸ್ತ್ರಿಗಳ ತಲೆ ಗಿರ್ರೆಂದು ಸುತ್ತಿತು. ಹೇಗೇ ಹೇಗೋ ನಡೆದು ಕೊಂಡು ಹೋಗಿ ಸ್ಟೇಷನ್ ಮುಟ್ಟಿದರು.

೬

ಶಾಸ್ತ್ರಿಗಳು ರೈಲುಗಾಡಿಯಲ್ಲಿ ಪ್ರಯಾಣವನ್ನಾರಂಭಿಸಿದ ಮೇಲೆ ಎರಡನೆ ದಿನದ ರಾತ್ರಿ. ಪಕ್ಕದಲ್ಲಿದ್ದ ಪ್ರಯಾಣಿಕರು ಕನಿಕರಗೊಂಡು ಮುದುಕರಿಗೆ ಮಲಗಲು ಸ್ಥಳ ಮಾಡಿಕೊಟ್ಟರು. ಆಯಾಸಗೊಂಡಿದ್ದ ಶಾಸ್ತ್ರಿಗಳು ಒಂದು ಕ್ಷಣದಲ್ಲಿ ನಿದ್ದೆಹೋಗಿಬಿಟ್ಟರು. ನಿದ್ದೆಯಲ್ಲಿ ಭಯಂಕರ ವಾದ ಕನಸೊಂದನ್ನು ಕಂಡರು.

ರಾಮಚಂದ್ರನು ವಿಲಾಯಿತಿಯಿಂದ ಹಿಂತಿರುಗಿಬಿಟ್ಟನು. ಆದರೆ ನೋಡಿದರೆ ಬ್ರಾಹ್ಮಣ ಹುಡುಗನಂತಿರಲಿಲ್ಲ. ಶಾಪ ಹೊಂದಿದ ತ್ರಿಶಂಕುವಿ ನಂತೆ, ಹೊಲೆಯರ ಹುಡುಗನಂತೆ, ಬಂದು ಸೇರಿದನು. ಐ.ಸಿ.ಎಸ್ ಪದವಿ ಏನೂ ಇಲ್ಲ. ಕೂಲಿಕಾರ ಹುಡುಗನಾಗಿದ್ದನು. ಆದರೆ—ಕನಸಿನ ಮಾಯೆ—ಪೂರ್ವಕ್ಕಿಂತಲೂ ಶಾಸ್ತ್ರಿಗಳು ಅವನಲ್ಲಿ ಹೆಚ್ಚಾದ ಪ್ರೀತಿಯುಳ್ಳವರಾಗಿದ್ದರು.

ಸೀತಾರಾಮಯ್ಯರವರೂ ಅವರ ಹೆಂಡತಿಯೂ ಇವರನ್ನು ಮನೆ ಯಿಂದ ಅಟ್ಟುವ ಹಾಗೆ ಕಂಡರು. ತೋಟಗಾರ, ಮೋಟಾರ್ ಡ್ರೈವರ್, ತೋಟಿ, ಮೊದಲಾಗಿ ಎಲ್ಲರೂ ಅವರನ್ನು ಹೇಯವಾಗಿ ಮಾತಾಡಿಸಿ ಮನೆ ಯಿಂದ ಓಡಿಸಿಬಿಟ್ಟರು. ಬೀದಿಯಲ್ಲಿ ಗುಂಪು ಸೇರಿಬಿಟ್ಟಿದೆ. ಶಾಸ್ತ್ರಿಗಳು ಹುಡುಗನೊಂದಿಗೆ ಹೇಗೋ ತಪ್ಪಿಸಿಕೊಂಡು ಓಡಿಹೋದರು....

ಶಾಸ್ತ್ರಿಗಳು ಈಗ ತಮ್ಮ ಗ್ರಾಮದಲ್ಲಿದ್ದರು. ಅವರೊಬ್ಬ ಹೊಲೆ ಯರ ಹುಡುಗನನ್ನು ತಮ್ಮ ಮನೆಯಲ್ಲಿ ಬಚ್ಚಿಟ್ಟಿರುವರೆಂದು ಊರಿನವರಿಗೆ ಗೊತ್ತಾಯಿತು. ಅವರು ಗುಂಪಾಗಿ ಬಂದು ಅವರನ್ನೂ ಅವರ ಹುಡುಗ ನನ್ನೂ ಅಗ್ರಹಾರದಿಂದ ಓಡಿಸಿಬಿಟ್ಟರು....

ಶಾಸ್ತ್ರಿಗಳು ಮತ್ತೆ ತಮ್ಮ ಮಗನೊಂದಿಗೆ ಮದರಾಸಿಗೆ ಬಂದರು. ಅಲ್ಲಿ ಒಂದು ಮೋಟಾರ್ ಬಸ್ಸಿನಲ್ಲಿ ಹತ್ತಿದರು. ಕಂಡಕ್ಟರು ಬಂದು "ಈ ಹುಡುಗನು ಯಾವ ಜಾತಿ?" ಎಂದು ಕೇಳಿದನು. ಕೊರಳಲ್ಲಿ ಒಂದು

ರುದ್ರಾಕ್ಷಿ ಸರವನ್ನು ಹಾಕಿಕೊಂಡು ಬಸ್ಸಿನಲ್ಲಿ ಕೂತಿದ್ದ ಮುದುಕರಾದ ಬ್ರಾಹ್ಮಣರೊಬ್ಬರು "ಅಯ್ಯೋ, ಇವನು ಪ್ರತಿಲೋಮ ಸಂತತಿ, ಚಂಡಾಲನು" ಎಂದು ಕೂಗಿಕೊಂಡರು. "ಅವನನ್ನು ಇಳಿಸಿಬಿಡು" ಎಂದು ಗಾಡಿಯಲ್ಲಿದ್ದವರೆಲ್ಲರೂ ಕೂಗಿದರು. ಬಸ್ಸಿನವನು ಹುಡುಗನನ್ನು ಎಳೆದು ಕೆಳಗಿಳಿಸಿದನು. ಶಾಸ್ತ್ರಿಗಳೂ ಕೂಡಲೇ ದುಃಖಿಸಿ ಇಳಿದುಬಿಟ್ಟರು, ನಾಚಿಕೆಯನ್ನು ಸಹಿಸಲಿಕ್ಕಾಗದೆ ಪಕ್ಕದಲ್ಲಿದ್ದ ಒಂದು ಗಲ್ಲಿಯಲ್ಲಿ ಇಬ್ಬರೂ ಬಚ್ಚಿಟ್ಟು ಕೊಂಡರು....

ಮತ್ತೆ ಕನಸು ಇದ್ದಕ್ಕಿದ್ದ ಹಾಗೆ ಬದಲಾಯಿಸಿತು. ಮೈಲಾಪುರದಲ್ಲಿ ಸೀತಾರಾಮಯ್ಯರವರ ಆಫೀಸು. ''ನಮ್ಮ ಹುಡುಗನನ್ನು ನಿಮ್ಮ ಹತ್ತಿರ ಗುಮಾಸ್ತೆಯ ಕೆಲಸಕ್ಕೆ ಇಟ್ಟುಕೊಳ್ಳಬಾರದೇ ?" ಎಂದು ಶಾಸ್ತ್ರಿಗಳು ಸೀತಾರಾಮಯ್ಯರನ್ನು ಅತಿ ದೈನ್ಯದಿಂದ ಬೇಡಿಕೊಂಡರು.

"ಅದು ಹೇಗೆ ಸಾಧ್ಯ ? ನನ್ನ ಹೆಂಡತಿ ಜಗಳವಾಡುವಳಲ್ಲಾ!" ಎಂದು ಸೀತಾರಾಮಯ್ಯರವರಂದರು. ಆ ಸಮಯಕ್ಕೆ ಸೀತಾರಾಮಯ್ಯರವರ ಹೆಂಡತಿ ಅಲ್ಲಿಗೆ ಬಂದಳು. ಜಗದೀಶ ಶಾಸ್ತ್ರಿಗಳು ಭಯದಿಂದ ನಡುಗಿದರು.

"ಹೊಲೆಯರ ಹುಡುಗನು ನಮ್ಮ ಆಫೀಸಿನಲ್ಲಿ ಕುಳಿತು ಕೆಲಸ ಮಾಡುವುದೇ ? ಬಹಳ ಚೆನ್ನಾಗಿದೆ, ನಮಗೆ ಬೇಡ. ಹಣವನ್ನು ಕೇಳಗಿಡಿ.'' ಎಂದು ಹೇಳಿ ಸೀತಾರಾಮಯ್ಯರವರ ಹೆಂಡತಿ ಪತ್ರವನ್ನು ತೆಗೆದು ಮುಂದೆ ಹಿಡಿದಳು. ಇದು ರಾಮಚಂದ್ರನ ಮದುವೆ ವಿಷಯದಲ್ಲಿ ಬರೆದಿಟ್ಟ ಪತ್ರ. ಸೀತಾರಾಮಯ್ಯರವರು ಅದುವರೆಗೆ ೧೫,೦೦೦ ರೂಪಾಯಿಗಳು ರಾಮಚಂದ್ರನಿಗಾಗಿ ಖರ್ಚುಮಾಡಿದ್ದರು. ಅದನ್ನು ತಿರುಗಿಕೊಡುವಂತೆ ಶಾಸ್ತ್ರಿಗಳನ್ನು ಕೇಳಿದರು....

ದೃಶ್ಯ ಮತ್ತೆ ಬದಲಾಯಿಸಿತು. ಮಠಾಧಿಪತಿಯೊಬ್ಬರು ಕಾಷಾಯ ಧಾರಿಯಾಗಿ ಕೈಯಲ್ಲಿ ದಂಡವನ್ನು ಹಿಡಿದವರಾಗಿ ಕೃಷ್ಣಾಜಿನದ ಮೇಲೆ ಕೂತಿದ್ದಾರೆ ''ಸ್ವಾಮೀ! ನನ್ನ ಮಗನನ್ನು ಬ್ರಾಹ್ಮಣನಾಗಿ ಮಾಡಲು ಸಾಧ್ಯವಿಲ್ಲವೇ ?'' ಎಂದು ಶಾಸ್ತ್ರಿಗಳು ಕೇಳಿದರು. ಕಾಷಾಯಧಾರಿಯು ಉಚ್ಚಸ್ವರದಲ್ಲಿ ಹೇಳುತ್ತಾನೆ: "ಆಗದೇ ಆಗದು. ಜಾತಿಚಂಡಾಲನಿಗೆ ಪ್ರಾಯ

ಶ್ಚಿತ್ತವಿಲ್ಲ. ಅವನ ನೀಚವಾದ ದೇಹ ಉರಿದು ಬೂದಿಯಾದ ಮೇಲೆಯೇ ಚಂಡಾಲತ್ವವು ಹೋಗುವುದು. ಈ ಜನ್ಮದಲ್ಲಿ ತನ್ನ ಕುಲಧರ್ಮವನ್ನು ಸರಿಯಾಗಿ ನಡೆಯಿಸುತ್ತ ಬಂದರೆ, ಮುಂದಿನ ಜನ್ಮದಲ್ಲಿ ಸ್ವಲ್ಪ ಉತ್ತಮ ಕುಲದ ಜನ್ಮ ಸಿದ್ಧಿಸಬಹುದು. ಆದರೆ ಅನೇಕ ಜನ್ಮಗಳಾದ ಮೇಲೆಯೇ ಬ್ರಾಹ್ಮಣನಾಗಲು ಸಾಧ್ಯ.''

ಜಗದೀಶ ಶಾಸ್ತ್ರಿಗಳು ಕೋಪಾವೇಶದಲ್ಲಿ ಕೂಗಿಕೊಂಡರು : "ಎಲೈ ಪಾಪಿ ! ನೀನು ಸಂನ್ಯಾಸಿಯೇ ! ನಂಬಿಕೆದ್ರೋಹ ಮಾಡಿದ ಕೇಸನ್ನು ಮರೆತೆಯಾ ? ಸುಳ್ಳು ಅರ್ಜಿಗಳನ್ನು ಹಾಕಿದೆಯಲ್ಲಾ ! ಬಾಡಿಗೆಗೆಂದು ತೆಗೆದಿದ್ದ ಸಾಮಾನುಗಳನ್ನು ಮಾರಿದೆಯೆಲ್ಲಾ ! ಜೈಲಿಗೆ ಹೋಗಬೇಕಾದವನು ಅಪರಾಧಿಯಾದರೂ ತಪ್ಪಿಸಿಕೊಂಡೆಯಲ್ಲಾ ? ಅದಕ್ಕೆಲ್ಲಾ ಯಾವ ಶಾಸ್ತ್ರಿಯೂ ಇಲ್ಲವೇ ?''

ಮಠಾಧಿಪತಿಯ ಕಣ್ಣುಗಳು ಕೋಪದಿಂದ ಕೆಂಪೇರಿದವು. 'ಭ್ರಷ್ಟಾ! ನಿನ್ನನ್ನು ಶಪಿಸಿದೆನು ! ನನ್ನ ಪೂರ್ವಾಶ್ರಮವನ್ನು ಕುರಿತು ನೀನು ಮಾತಾಡಿಬಿಟ್ಟಿರುವೆ !" ಎಂದು ಹೇಳಿ ದಂಡವನ್ನೆತ್ತಿ ಹೊಡೆಯಲು ಬಂದರು. ಶಾಸ್ತ್ರಿಗಳು ಓಡಿ ಬೀದಿ ಬಾಗಿಲಿಗೆ ತಲೆಯನ್ನು ಡಿಕ್ಕಿ ಕೊಟ್ಟರು.

* * *

ನಿದ್ದೆ ಹೋಗುತ್ತಿದ್ದ ಮುದುಕರು ಗಾಡಿಯಲ್ಲಿದ್ದ ಬೆಂಚಿನಿಂದ ಹೊರಳಿ ಕೆಳಗೆ ಬಿದ್ದರು. ಆ ಸಮಯದಲ್ಲಿ ಕಣ್ಣು ಬಿಟ್ಟರು. ಪಕ್ಕದಲ್ಲಿದ್ದವರು ಅವರನ್ನು ನೋಡಿ ನಗುತ್ತಿದ್ದರು.

೭

ಮರುದಿನ ರಾತ್ರಿಯೂ ಶಾಸ್ತ್ರಿಗಳ ನಿದ್ದೆಯಲ್ಲಿ , ಇದೇ ರೀತಿ ತಮ್ಮ ಮಗನ ವಿಷಯವಾಗಿಯೇ ಕನಸುಗಳು ಬಂದವು. ಕಣ್ಣನ್ನು ಮುಚ್ಚಿದರೆ ತಕ್ಷಣವೇ ಕನಸು.

* * *

ಶಾಸ್ತ್ರಿಗಳು ಮತ್ತೆ ತಮ್ಮ ಮಗನೊಡನೆ ಅಲೆಯುತ್ತಿದ್ದರು. ಹಸಿದು ಒಂದು ಕಾಫಿ ಹೋಟಲೊಳಗೆ ಇಬ್ಬರೂ ಪ್ರವೇಶಿಸಿದರು. ಪರಿಚಾರಕನು

ಇಬ್ಬರಿಗೂ ಎಲೆಗಳಲ್ಲಿ ಇಡ್ಲಿಯನ್ನು ತಂದು ಕೊಟ್ಟನು. ತಿನ್ನುವುದಕ್ಕೆ ಆರಂಭಿಸಿದಾಗ ಅಲ್ಲಿ ಕೂತು ಇವರಂತೆಯೇ ತಿನ್ನುತ್ತಿರುವವರಲ್ಲಿ ಒಬ್ಬರು "ಆ ಹುಡುಗನು ಯಾರು ?" ಎಂದು ಕೇಳಿದರು. ಶಾಸ್ತ್ರಿಗಳು ಬೆಚ್ಚಿಬಿದ್ದು ಉತ್ತರ ಹೇಳಲಾಗದವರಾದರು. "ಅವನು ಚಂಡಾಲ"ನೆಂದು ಒಂದು ಧ್ವನಿ ಕೇಳಿಸಿತು. ತಕ್ಷಣವೇ ಎಲ್ಲರೂ ಸೇರಿ "ಚಂಡಾಲ ! ಚಂಡಾಲ ! ಹೊರಡಿರಿ. ಹೊರಗೆ !" ಎಂದು ಕೂಗಿದರು. ಪರಿಚಾರಕನು ಹುಡುಗನ ಮುಂದಿಟ್ಟಿದ್ದ ಇಡ್ಲಿಯನ್ನು ತೆಗೆದು ಎಂಜಲಿನ ಗುಂಡಿಯಲ್ಲಿ ಹಾಕಿಬಿಟ್ಟು ಹುಡುಗನ ಕತ್ತನ್ನು ಹಿಡಿದು ಹೊರಗೆ ತಳ್ಳಿದನು. "ನನ್ನ ಮಗ ! ನನ್ನ ಮಗ !" ಎಂದು. ಕೂಗಿಕೊಂಡು ಶಾಸ್ತ್ರಿಗಳು ಅವನ ಹಿಂದೆ ಹೊರಗೆ ಬಂದರು.

ಕುಂಭಕೋಣದ ರಾವ್ ಬಹದ್ದೂರ್ ನರಸಿಂಹಾಚಾರ್ಯರವರು ದಿಲ್ಲಿ ಶಾಸನ ಸಭೆಯ ಸದಸ್ಯರು. "ನೀವು ದಿಲ್ಲಿಗೆ ಹೋಗುವಾಗ ನಮ್ಮ ಹುಡುಗನನ್ನು ಗುಮಾಸ್ತೆಯಾಗಿ ಕರೆದುಕೊಂಡು ಹೋಗಬಾರದೇ? ಹುಡುಗ ಬಿ. ಎ. ಓದಿದ್ದಾನೆ. ನನ್ನ ಪಾಪದಿಂದ ಇದ್ದಕ್ಕಿದ್ದಹಾಗೆ ಹೊಲೆಯನಾಗಿ ಬಿಟ್ಟಿರುತ್ತಾನೆ." ಎಂದರು.

"ಸಾಧ್ಯವಿಲ್ಲ, ಶಾಸ್ತ್ರಿಗಳೇ ! ದಿಲ್ಲಿಯಲ್ಲಿ ನಮ್ಮೂರಿನವರು ಜಾತಿ ವ್ಯತ್ಯಾಸವನ್ನು ಹೆಚ್ಚಾಗಿ ಲಕ್ಷಿಸುವುದಿಲ್ಲವೆನ್ನುವುದು ನಿಜವೇ ! ಆದರೂ ಹೊಲೆಯರ ಹುಡುಗನನ್ನು ಮನೆಯೊಳಗೆ ಹೇಗೆ ಇಟ್ಟುಕೊಳ್ಳಲಾದೀತು ? ಶೂದ್ರರ ಹುಡುಗನಾಗಿದ್ದರೂ ಬಾಧಕವಿಲ್ಲ." ಎಂದು ನರಸಿಂಹಾಚಾರ್ಯರು ಹೇಳಿದರು. "ಹಾಗಾದರೆ ಅವನನ್ನು ಶೂದ್ರರ ಹುಡುಗನನ್ನಾಗಿ ಮಾಡಿ ಬಿಡಲೇ ? ಎಂದು ಶಾಸ್ತ್ರಿಯವರು ಆತುರದಿಂದ ಕೇಳಿದರು.

"ನಾನು ಹೇಗೆ ಶೂದ್ರರ ಹುಡುಗನಾಗಲು ಸಾಧ್ಯವಪ್ಪಾ! ನಾನು ಸಂಕರ ಜಾತಿಯವನಾಯಿತೇ ! ನೀವೇ ಹಾಗೆ ಹೇಳಿದ್ದೀರಲ್ಲವೇ ?" ಎಂದು ಹುಡುಗನು ಕೇಳಿದನು.

"ಅಯ್ಯೋ—ಅದೂ ನಿಜವೇ. ಶಾಸ್ತ್ರಗಳನ್ನು ಯಾರಾದರೂ ಸುಟ್ಟು ಬೂದಿ ಮಾಡಲಾರರೇ ?" ಎಂದು ಶಾಸ್ತ್ರಿಗಳು ಕೂಗಿಕೊಂಡರು.

"ಅಪ್ಪಾ! ಅಪ್ಪಾ! ರೈಲ್ವೆ ಪೋರ್ಟರ್ ಕೆಲಸಕ್ಕೆ ಹೋಗುತ್ತೇನೆ. ಅಲ್ಲಿ ಯಾರೂ ನನ್ನನ್ನು ತೊಂದರೆ ಮಾಡಲಾರರು." ಎಂದನು ರಾಮಚಂದ್ರ.

"ಅದನ್ನೂ ನೋಡೋಣ ಮಗೂ" ಎಂದು ಶಾಸ್ತ್ರಿಗಳು ಹೇಳಿದರು. ತಕ್ಷಣವೇ ರಾಮಚಂದ್ರನು ರೈಲ್ವೇ ಪೋರ್ಟರಾಗಿ ಮಾರ್ಪಟ್ಟನು. ಮೊದಲು ಅವನು ಹೊತ್ತ ಪೆಟ್ಟಿಗೆಗೆ ನಾಲ್ಕಾಣೆ ಸಿಕ್ಕುತ್ತಿತ್ತು. ಅನಂತರ ಒಂದು ಸಲ ಅವನು ಹೊತ್ತುಕೊಂಡು ಹೋಗುತ್ತಿರುವಾಗ ಹುಡುಗನೊಬ್ಬನು ಓಡಿ ಬಂದು "ಸ್ವಾಮಿ! ಸ್ವಾಮಿ! ಅವನು ಹೊಲೆಯರ ಹುಡುಗ" ಎಂದನು.

ಪೆಟ್ಟಿಗೆ ಹಾಸಿಗೆಯ ಮಾಲಿಕರು ಒಬ್ಬ ಬ್ರಾಹ್ಮಣ ಉದ್ಯೋಗಸ್ಥರು. ಅವರು "ಎಲೈ ದುರ್ಮಾರ್ಗನೇ! ಹೇಗೋ ನನ್ನ ಸಾಮಾನನ್ನು ಮುಟ್ಟಿದೆ?" ಎಂದು ಕೂಗಿಕೊಳ್ಳುತ್ತ ಛತ್ರಿಯ ಕೊನೆಯಿಂದ ಹುಡುಗನ ಬೆನ್ನನ್ನು ಚುಚ್ಚಿದರು. ಅವನು ಪೆಟ್ಟಿಗೆಯನ್ನೂ ಹಾಸಿಗೆಯನ್ನೂ ಕೆಳಗೆ ಹಾಕಿಬಿಟ್ಟು ಓಡಿಹೋದನು............

ಶಾಪಕ್ಕೆ ಗುರಿಯಾಗಿದ್ದ ಆ ಹುಡುಗನೊಂದಿಗೆ ಶಾಸ್ತ್ರಿಗಳು ಬಹಳ ಅಲೆದಾಡಿದರು. ಆಕಾಶವಾಣಿಯಂತೆ ಎಲ್ಲಿಂದಲೋ "ಚಂಡಾಲ! ಚಂಡಾಲ!'' ಎಂಬು ಕೇಳಿಸುತ್ತಲಿತ್ತು. ಮರಗಳ ಎಲೆಗಳಾಡುವ ಶಬ್ದವೂ 'ಚಂಡಾಲ! ಚಂಡಾಲ!' ಎನ್ನುವ ಹಾಗೆ ತೋರಿತು. ಪಕ್ಷಿಗಳೂ 'ಚಂಡಾಲ! ಚಂಡಾಲ!' ಎಂದು ಹಾಡಿದವು.

ಹುಡುಗನೊಂದಿಗೆ ತಿರುಗಾಡಿ ಮುದುಕರಿಗೆ ಸಾಕಾಯಿತು. ಕಾಲು ನೋವಾಯಿತು. ಬಾಯಾರಿಕೆ ಬಹಳ ಹೆಚ್ಚಾಯಿತು. ಸಮೀಪದಲ್ಲಿ ಕೊಳ, ಬಾವಿ ಯಾವುದೂ ಕಾಣಲಿಲ್ಲ.

"ಮಗೂ! ಬಹಳ ಬಾಯಾರಿಕೆಯಾಗಿದೆ. ಸ್ವಲ್ಪ ನೀರು ತೆಗೆದುಕೊಂಡು ಬರುವೆಯಾ?" ಎಂದು ಶಾಸ್ತ್ರಿಗಳು ಹೇಳಿದರು.

"ನಾನು ಕೇಳಿದರೆ ಕೊಡುವರಾರಪ್ಪಾ!" ಎಂದನು ರಾಮಚಂದ್ರ.

ನಿಜ. ಮಗೂ! ನಾವು ಸಾಯಲೇಬೇಕು."

"ಸಾಯುವುದೇ! ಅಪ್ಪಾ? ಎದ್ದು ನಡೆಯಿರಿ. ವಿಲಾಯಿತಿಗೆ ಹೋಗೋಣ. ಅಲ್ಲಿ ಜಾತಿ ಮೈಲಿಗೆ ಇಲ್ಲ."

"ವಿಲಾಯಿತಿಗೆ ಹೋಗುವುದು ಹೇಗೆ? ನಾವಿನ್ನೂ ವೃದ್ಧಾಚಲದಲ್ಲಿಯೇ ಇದ್ದೇವೆಯಲ್ಲವೇ?" ಎಂದರು ಶಾಸ್ತ್ರಿಗಳು.

"ಅಗೋ ಒಂದು ಇಳಿಯುವ ಭಾವಿ ಇದೆ. ಇಳಿದು ನೀರು ಕುಡಿಯೋಣ." ಎಂದು ಹುಡುಗನು ಕರೆದುಕೊಂಡು ಹೋದನು. ಭಯಪಟ್ಟುಕೊಳ್ಳುತ್ತ ನಡುಗುತ್ತ ಭಾವಿಯೊಳಗಿಳಿದರು. ಅಲ್ಲಿ ಯಾರೂ ಇರಲಿಲ್ಲ. ಇಬ್ಬರೂ ದಣಿಯುವಷ್ಟು ನೀರನ್ನು ಕುಡಿದರು. ಮತ್ತೆ ಮೆಟ್ಟಲು ಹತ್ತಿ ಹೊರಗೆ ಬರುತ್ತಿರುವ ಸಮಯದಲ್ಲಿ ಮುದುಕಿಯೊಬ್ಬಳು ಅಲ್ಲಿಗೆ ಬಂದಳು. ಅವರನ್ನು ನೋಡಿದ ಕೂಡಲೇ "ಅಯ್ಯೋ! ಇದೇನು? ಯಾರೋ ಹೊಲೆಯರ ಹುಡುಗನು ಬಂದು ಊರ ಭಾವಿಯನ್ನು ಮೈಲಿಗೆ ಮಾಡಿಬಿಟ್ಟನೇ ಪಾಪಿ!'' ಎಂದು ಕೂಗಿಕೊಂಡಳು.

ತಕ್ಷಣವೇ ಅಲ್ಲಿ ಒಂದು ಗುಂಪು ಸೇರಿತು. ಎಲ್ಲರೂ ಸೇರಿ ರಾಮಚಂದ್ರನನ್ನು ಹೊಡೆಯುವುದಕ್ಕೆ ಬಂದರು. ಶಾಸ್ತ್ರಿಗಳು ಹುಡುಗನ ಕೈಯನ್ನು ಹಿಡಿದು ಕರೆದುಕೊಂಡು ಓಡಿದರು. ದೂರದಲ್ಲಿ ಒಂದು ಗುಡಿ ಕಾಣಿಸಿತು. "ಸ್ವಾಮಿ! ಭಗವಂತನೇ! ನೀನೇ ಕಾಪಾಡಬೇಕು?" ಎಂದು ಕೂಗಿಕೊಳ್ಳುತ್ತ ಗುಡಿಯ ಬಳಿ ಓಡಿಬಂದರು. ಆದರೆ ಗುಡಿಯನ್ನು ಸಮೀಪಿಸುತ್ತಲೇ ಸಂದೇಹ ಉಂಟಾಯಿತು.

''ಭಗವಂತನೇ! ಎಲ್ಲರೂ ನನ್ನ ಚಂಡಾಲನೆಂದು ಹೇಳುತ್ತಾರೆಯೇ! ನಿನ್ನ ಗುಡಿಯಲ್ಲಾದರೂ ನಾವು ಬರಬಹುದೇ? ನಿನ್ನ ಹೊರತು ನಮಗೆ ಬೇರೆ ಗತಿಯಾರು?'' ಎಂದು ಹಂಬಲಿಸಿದರು.

"ಬರಬಹುದು! ಎಲ್ಲರಿಗೂ ತಾಯಿಯೂ ತಂದೆಯೂ ನಾನೇ!'' ಎಂದು ಗುಡಿಯೊಳಗಿನಿಂದ ಅಶರೀರ ವಾಕ್ಯದಂತೆ ಧ್ವನಿಯೊಂದು ಕೇಳಿಸಿತು.

ಶಾಸ್ತ್ರಿಗಳೂ ಹುಡುಗನೂ ಒಳಗೆ ಪ್ರವೇಶಿಸಿದರು. "ಅಪ್ಪಾ! ಕೊನೆಯಲ್ಲಿ ಬಚ್ಚಿಟ್ಟುಕೊಳ್ಳುವುದಕ್ಕೆ ಸ್ಥಳವೊಂದು ಸಿಕ್ಕಿದಹಾಗಾಯಿತು" ಎಂದು ಶಾಸ್ತ್ರಿಗಳು ಹೇಳಿ ದೀರ್ಘಶ್ವಾಸ ಬಿಟ್ಟರು.

ಅಷ್ಟರಲ್ಲಿ "ಅಯ್ಯೋ! ಚಂಡಾಲನು ಗುಡಿಯೊಳಗೆ ಬಂದುಬಿಟ್ಟನೇ!" ಎಂದು ಕೂಗಿಕೊಳ್ಳುತ್ತ ಅರ್ಚಕರು ಓಡಿಬಂದರು. ಇನ್ನೂ ಅನೇಕರು ಎಲ್ಲಿಂದಲೋ ಪಿಲಿಪಿಲಿಯೆಂದು ಬಂದು ಅವರನ್ನು ಮುತ್ತಿದರು.

'ಹೊಲೆಯರ ಹುಡುಗನಿಗೆ ಏನು ಧೈರ್ಯ? ಹೊಡೆಯಿರಿ, ಒದೆಯಿರಿ!' ಎನ್ನುವ ಕೂಗುಗಳು ಹೊರಟವು.

'ಅಯ್ಯೋ! ಅವನು ಹೊಲೆಯನಲ್ಲ. ನನ್ನ ಮಗ! ನನ್ನ ಮಗ' ಎಂದು ಶಾಸ್ತ್ರಿಗಳು ಗಟ್ಟಿಯಾಗಿ ಅರಚಿಕೊಂಡರು.

ಆ ಸಮಯದಲ್ಲಿ ಶಾಸ್ತ್ರಿಗಳ ಹೆಂಡತಿ ಹೇಗೋ ಅಲ್ಲಿಗೆ ಬಂದು ಸೇರಿದಳು. "ಅದು ಸುಳ್ಳು. ಮುದುಕನನ್ನು ನಂಬಬೇಡಿ! ಅವನು ನನ್ನ ಮಗ! ನಾನು ಸಂಕರ ಜಾತಿಯವಳು. ಹುಡುಗನೇನೋ ಚಂಡಾಲನೇ" ಎಂದು ಅವಳು ಕೂಗಿಕೊಂಡಳು.

"ಎಲೆ ಪಾಪಿ! ದ್ರೋಹಿ! ಚಂಡಾಲಿ!" ಎಂದು ಶಾಸ್ತ್ರಿಗಳು ಕೂಗಿಕೊಂಡರು. ಅನಂತರ ಗುಂಪನ್ನು ನೋಡಿ "ಭಗವಂತನು ಅಶರೀರವಾಣಿಯ ಮೂಲಕ ಮಾತು ಕೊಟ್ಟನಲ್ಲಾ—ಒಳಗೆ ಬರಬಹುದೆಂದು" ಎಂದು ಗಟ್ಟಿಯಾಗಿ ಹೇಳಿದರು.

"ಸುಳ್ಳು! ಸುಳ್ಳು! ಅಶರೀರವಂತೆ! ಮತ್ತೊಂದಂತೆ! ಹೊಲೆಯರ ಹುಡುಗನನ್ನು ಒದೆಯಿರಿ, ಕೊಲ್ಲಿರಿ" ಎಂದು ಕೂಗಿಕೊಳ್ಳುತ್ತ ರಾಮಚಂದ್ರನ ಮೇಲೆ ಬಿದ್ದು ಹೊಡೆಯಲಾರಂಭಿಸಿದರು.

* * *

"ಅಯ್ಯೋ" ಎಂದು ಕೂಗಿಕೊಳ್ಳುತ್ತ ಶಾಸ್ತ್ರಿಗಳು ನಿದ್ದೆಯಿಂದೆದ್ದು ಕೂತುಕೊಂಡರು. ಅವರನ್ನು ತಟ್ಟಿ ಎಬ್ಬಿಸಿದ ಟಿಕೆಟ್ ಕಲೆಕ್ಟರ್ "ಏತಕ್ಕೆ ತಾತಾ ಒದರುತ್ತಿದ್ದೀರಿ? ಟಿಕೆಟ್ ತೋರಿಸಿರಿ" ಎಂದನು.

ಎಲ್ಲ ಬರಿಯ ಕನಸು. ಆದರೂ ಶಾಸ್ತ್ರಿಗಳ ದೇಹ ಬಹಳ ಹೊತ್ತು ನಡುಗುತ್ತಿತ್ತು. ರೈಲೋಡುವ ಶಬ್ದವೂ ಸಹ ಅವರ ಕಿವಿಯಲ್ಲಿ "ಚಂಡಾಲನು-ಚಂಡಾಲನು" ಎನ್ನುವ ಹಾಗೆ ಕೇಳಿಸಿತು.

೮

ಕೆಲವು ದಿನಗಳಾದಮೇಲೆ ರಾಮಚಂದ್ರನು ವಿಲಾಯಿತಿಯಿಂದ ಹಿಂತಿರುಗಿ ಕರ್ನೂಲಿನಲ್ಲಿ ಅಸಿಸ್ಟೆಂಟ್ ಕಲೆಕ್ಟರಾದನು. ಜಗದೀಶ ಶಾಸ್ತ್ರಿಗಳ ಹೆಂಡತಿ ತಿಳಿಸಿದ ವಿವರಗಳು ರಾಮಚಂದ್ರನಿಗಾಗಲಿ ಸೀತಾರಾಮಯ್ಯರಿಗಾಗಲಿ ಏನೂ ತಿಳಿಯವು.

ಮುದುಕರು ಕಾಣದೇ ಹೋದರಲ್ಲಾ ಎಂದು ಎಲ್ಲರೂ ತವಕಗೊಂಡು ಕೆಲವು ದಿನಗಳು ಇದೇ ಮಾತನ್ನಾಡುತ್ತಿದ್ದರು. ಇದ್ದಕ್ಕಿದ್ದ ಹಾಗೆ ವೈರಾಗ್ಯ ಹುಟ್ಟಿ ಕಾಶಿಯಾತ್ರೆಗೆಂದು ಹೋಗಿ ಅಲ್ಲಿ ಸನ್ಯಾಸವನ್ನು ತೆಗೆದುಕೊಂಡು ಬಿಟ್ಟರೆಂದು ಕೆಲವರು ಹೇಳಿಕೊಂಡರು. ಗಂಗಾನದಿಯಲ್ಲಿ ಮುಳುಗಿ ಸತ್ತು ಹೋದರೆಂದು ಇತರರು ಹೇಳಿಕೊಂಡರು.

ಕೆಲವು ದಿನಗಳು ನಿರೀಕ್ಷಿಸಿ ನೋಡಿ ಅವರು ಬಾರದೆ ಇದ್ದುದರಿಂದ ಒಡಂಬಡಿಕೆಯಲ್ಲಿದ್ದಂತೆ ಸೀತಾರಾಮಯ್ಯರವರ ಮಗಳಿಗೂ ಅಸಿಸ್ಟೆಂಟ್ ಕಲೆಕ್ಟರ್ ಜೆ. ಆರ್. ಚಂದ್ರನಿಗೂ ಮದುವೆ ಸಂಭ್ರಮವಾಗಿ ನಡೆಯಿತು.

—:o:—

## ೫. ತಿಳಿಯದ ಮಗು

" ಅಮ್ಮಾ, ನಾನು ಹತ್ತಿರ ಹೋದರೆ ಬಿಳಿಯ ಎತ್ತು ತಿವಿಯಲು ಬರುತ್ತದೆ. ಕರಿಯನು ಹೋದರೆ ಏನೂ ಮಾಡುವುದಿಲ್ಲ, ತಿವಿಯುವುದಿಲ್ಲ. ಇದೇತಕ್ಕೆ ಹೀಗೆ ? "

" ಅವನು ಅದರ ಹತ್ತಿರ ಹೋಗಿ ಹೋಗಿ ಅದು ಪಳಗಿದೆ, ಅದು ಸುಮ್ಮನಿರುವುದು. ನಿನಗೆ ಅದು ಪಳಗಿಲ್ಲ. ಅದಕ್ಕಾಗಿ ತಿವಿಯುವುದು."

" ನಾನು ಪಳಗಿಸಿಕೊಳ್ಳುತ್ತೇನಲ್ಲಾ—ಅಮ್ಮಾ."

" ಬೇಡ, ಬೇಡ ! ನಿನಗೇತಕ್ಕೆ ಆ ಕೆಲಸ ! ನೀನು ಆಟವಾಡಿಕೊಂಡಿರು. ಅವನು ಹೊಲೆಯರ ಹುಡುಗ. ದನ ಕಾಯಬೇಕು. ಇಗೋ ಹೋಳಿಗೆ ತಿನ್ನು."

ಸುಬ್ಬುವಿಗೆ ನಾಲ್ಕು ವರ್ಷ. ವಯಸ್ಸಿಗೆ ನಿರೀಕ್ಷಿಸಲಾಗದಂತೆ ಚತುರವಾಗಿ ಮಾತಾಡುವ ಮಗು. ತಾಯಿತಂದೆಗಳಿಗೆ ಬಹಳ ಪ್ರೀತಿ. ಎರಡು ಹೆಣ್ಣು ಮಕ್ಕಳಾದ ಮೇಲೆ ಹುಟ್ಟಿದ ಮೊದಲನೆಯ ಗಂಡು ಮಗು.

" ಅಮ್ಮಾ—ಹೋಳಿಗೆ ಏತರಿಂದ ಮಾಡಿದ್ದು ? "

" ಬೆಲ್ಲ, ಬೇಳೆ, ತೆಂಗಿನಕಾಯಿ ಎಲ್ಲಾ ಹಾಕಿ ಮಾಡಿದ್ದು. ತಿಂದು ನೋಡಿ ಹೇಳು ಚೆನ್ನಾಗಿದೆಯೇ ? "

" ಅಮ್ಮಾ, ಹೊಲೆಯ ಎಂದರೇನು ? ಕರಿಯನು ಏತಕ್ಕೆ ನಮ್ಮ ಮನೆಯೊಳಕ್ಕೆ ಬರುವುದಿಲ್ಲ ? ಎಲ್ಲರೂ ಬರುತ್ತಾರಲ್ಲಾ ! "

" ಅದು ಹಾಗೆಯೇ ಮಗು ! ಅವನು ಹೊಲೆಯ."

" ಹೇಳಮ್ಮ, ಹೊಲೆಯ ಎಂದರೇನು ? "

" ಅದೆಲ್ಲಾ ನಿನಗೆ ತಿಳಿಯಲಾರದು, ನೀನು ಹೋಳಿಗೆ ತಿನ್ನು."

ನಾನು ತಿನ್ನಲಾರೆ, ಏತಕ್ಕೆ ಕರಿಯ ಒಳಕ್ಕೆ ಬರಕೂಡದು ? "

" ತೊಂದರೆ ಮಾಡಬೇಡ—ಹೋಗು. ಅವನು ಎಷ್ಟು ಕೊಳಕಾಗಿ ಇದ್ದಾನೆ ನೋಡು. ಅವನು ಒಳಕ್ಕೆ ಬಂದರೆ ಮೈಲಿಗೆಯಾಗಿಬಿಡುವುದು."

" ಮೈಲಿಗೆ ಎಂದರೆ ಏನಮ್ಮಾ ? ಎತ್ತಿನ ಸಗಣಿಯೇ ? "

" ಎತ್ತಿನ ಸಗಣಿ ಮೈಲಿಗೆಯಲ್ಲ. ಅವನ ಮೈಯಲ್ಲಿ ಮಣ್ಣೂ ಕೆಸರೂ ನೋಡು. ಅವನು ಸ್ನಾನವೇ ಮಾಡುವುದಿಲ್ಲ. ಅವನು ಹೊಲೆಯ."

" ಅಮ್ಮಾ—ನಮ್ಮ ಮನೆಯಲ್ಲಿ ಕರಿಯನನ್ನು ಸ್ನಾನ ಮಾಡೆಂದು ಹೇಳಲೇ ? "

" ಇದೇನು ವಿಪರೀತ ? ಸುಬ್ಬೂ, ಹೋಗು ! ನೀನು ಅವನೊಡನೆ ಆಡಬೇಡ."

" ಅವನೊಡನೆಯೇ ಆಡುವೆನು. ಅವನಿಗೂ ಒಂದು ಹೋಳಿಗೆ ಕೊಡು."

" ಆಗುವುದಿಲ್ಲ. ಹೊಲೆಯರ ಹುಡುಗನಿಗೆ ಹೋಳಿಗೆಯನ್ನು ಕೊಡೋದೇ ? ಕೊಟ್ಟರೆ ಮಾಡಿದ ಹೋಳಿಗೆಯುಲ್ಲಾ ಕೆಟ್ಟು ಹೋಗುವುದು. ಓಡಿಹೋಗು. ಬೀದಿಯ ಬಾಗಲಲ್ಲಿ ಮಾವ ಬಂದಿದ್ದಾರೆ. ನಿನ್ನನ್ನು ಕರೆಯುತ್ತಿರುವರಂತೆ—ನೋಡು."

" ಇಲ್ಲ. ಇಲ್ಲ. ಇನ್ನೊಂದು ಹೋಳಿಗೆ ಕೊಡು. ಪಾಪ ಅವನೂ ತಿನ್ನಲಿ."

" ಆಗುವುದಿಲ್ಲ—ಹೋಗು. ಇಲ್ಲಿಯೇ ತಿಂದು ಹೋಗು. ಅವನ ಹತ್ತಿರ ಹೋಗಬೇಡ."

" ಹಾಗಾದರೆ ನನಗೂ ಬೇಡ" ಎಂದು ಹೇಳಿ ಹೋಳಿಗೆಯನ್ನು ಕೆಳಗೆ ಹಾಕಿ ಹಿತ್ತಿಲಕಡೆ ಓಡಿದನು.

" ಕರಿಯಾ ! ನೀನು ಹೊಲೆಯನೇ ? "

" ಹೌದು."

" ನಾನು ಹೊಲೆಯನಲ್ಲವೆ ? "

" ಛೀ ! ನೀನು ಬ್ರಾಹ್ಮಣ. ನಾನಾದರೋ ಹೊಲೆಯ."

" ನಿನಗೆ ಅಮ್ಮ ಇದ್ದಾಳೆಯೇ ? "

" ಓ, ಇದ್ದಾಳೆ."

" ನಮ್ಮ ಅಮ್ಮನ ಹಾಗೆ ಇದ್ದಾಳೆಯೇ ? "।

" ಹೌದು "

" ನಿನಗೆ ಹೋಳಿಗೆ ಮಾಡಿಕೊಡುತ್ತಾಳೆಯೇ ? "

" ಹೋಳಿಗೆಯೇ ? ಇಲ್ಲ. ನಮ್ಮ ಮನೆಯಲ್ಲಿ ಹೋಳಿಗೆ ಇಲ್ಲ." ಎಂದು ಕರಿಯ ನಗುತ್ತಾ ಹೇಳಿದನು.

" ಇವತ್ತು ದೀಪಾವಳಿ. ನಾವೆಲ್ಲರೂ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಿದೆವು. ನೀನು ಸ್ನಾನ ಮಾಡಿದೆಯಾ ? "

" ನಮ್ಮ ಬಾವಿಯಲ್ಲಿ ನೀರು ಬತ್ತಿಹೋಗಿದೆ. ಎಣ್ಣೆಗೆ ಅಪ್ಪನ ಹತ್ತಿರ ಕಾಸು ಎಲ್ಲಿರುವುದು ? "

" ನಮ್ಮ ಮನೆಯಲ್ಲಿ ಸ್ನಾನ ಮಾಡುವೆಯೇನು ? "

" ಅಯ್ಯೋ—ಬಿಡುವರೇ ಒಳಕ್ಕೆ ? "

" ನೀನು ಬಾ ಕರಿಯಾ ! ಸ್ನಾನ ಮಾಡಿಕೊಂಡು ಬಂದರೆ ಮನೆಯಲ್ಲಿ ಬಿಡುತ್ತಾರೆ."

" ಅಯ್ಯಯ್ಯೋ—ಒದ್ದು ಬಿಡುವರು."

" ಛೀ ! ಛೀ ! ನಮ್ಮ ಅಮ್ಮ ಒದೆಯಲಾರಳು."

ಹೀಗೆ ಮಾತಾಡುತ್ತಿರುವಾಗ ಮಾವ ಕೃಷ್ಣಯ್ಯನವರು " ಅಪ್ಪಾ ! ಸುಬ್ಬೂ ! ಇಗೋ, ಪಟಾಕಿ " ಎಂದು ಹೇಳುತ್ತಾ ಬಂದರು.

ತಕ್ಷಣವೇ ಸುಬ್ಬು ಒಂದು ಹಾರು ಹಾರಿ ಮಾವನ ಬಳಿಗೆ ಹೋಗಿ ಅವರ ಹೆಗಲ ಮೇಲೆ ಹತ್ತಿ ಕೂತುಕೊಂಡನು. ಅವರು ಅವನನ್ನು ಗಟ್ಟಿಯಾಗಿ ಅಪ್ಪಿಕೊಂಡು ಅನಂತರ ಅವನ ಕೈಯಲ್ಲಿ ಪಟಾಕಿ ಕಟ್ಟನ್ನು ಕೊಟ್ಟು " ಸುಬ್ಬೂ, ನಿನಗೆ ಸುಡುವುದಕ್ಕೆ ಬರುವುದೇ ? " ಎಂದು ಕೇಳಿದರು.

" ಓ ! ಬರುವುದು " ಎಂದು ಹೇಳುತ್ತ ಪಟಾಕಿ ಕಟ್ಟನ್ನು ಬಿಚ್ಚಿ ಸರಗಳನ್ನು ಬೇರೆ ಮಾಡಿ " ಮಾವಾ, ಇದರಲ್ಲಿ ಅರ್ಧ ಕರಿಯನಿಗೆ ಕುಯ್ದು ಕೊಡು " ಎಂದನು.

"ಹೊಲೆಯರ ಹುಡುಗನಿಗೆ ಏತಕ್ಕೆ ಪಟಾಕಿ! ಅವನನ್ನು ಮುಟ್ಟ ಬೇಡ. ಬಾ ಒಳಕ್ಕೆ ಹೋಗೋಣ" ಎಂದು ಹೇಳಿ ಕರಿಯನ ಕಡೆ ತಿರುಗಿ :

"ಪಟಿಂಗ ಹುಡುಗಾ—ಹೊಲೆಯರ ಮಗನೇ—ನಿನಗೇನು ಇಷ್ಟು ಗರ್ವ! ಕೂಸಿಗೆ ಇಷ್ಟು ಹತ್ತಿರ ಸರಿದು ಬರುವೆ. ಓಡಿಹೋಗು ದೂರ." ಎಂದು ಗಟ್ಟಿಯಾಗಿ ಗದರಿಸಿದರು.

ಕರಿಯನು ಓಡಿಹೋಗಿ ದೂರ ನಿಂತುಕೊಂಡನು. ಆದರೆ ಅವನ ಕಣ್ಣು ಪಟಾಕಿ ಕಟ್ಟಿನ ಮೇಲೆಯೇ ಇತ್ತು. ಸುಬ್ಬುವಿಗೆ ಪ್ರಪಂಚವೇ ತಿಳಿಯಲಿಲ್ಲ. ಆಗ ಸುಬ್ಬುವಿನ ತಾಯಿಯು ಬಂದಳು.

"ನಿನ್ನ ಮಗುವನ್ನು ನೋಡು, ಸಾವಿತ್ರಿ! ಹೊಲೆಯರ ಹುಡುಗನಿಗೂ ಪಟಾಕಿ ಕೊಡು ಎಂದು ತೊಂದರೆ ಮಾಡುತ್ತಾನೆ." ಎಂದು ಸುಬ್ಬುವನ್ನು ಎತ್ತಿಕೊಂಡು ಮುದ್ದಾಡಿದರು.

"ಈ ಮಗೂ ಇದ್ದಾನಲ್ಲಾ—ವಿಪರೀತ! ಅದೇನೆಂದು ಹೇಳಲಿ?" ಎಂದು ಬಹಳ ಹಿಗ್ಗುತ್ತ ಅವಳೂ ಸುಬ್ಬುವನ್ನು ಎತ್ತಿ ಅಪ್ಪಿಕೊಂಡು ಮುದ್ದಿಡಲು ಆರಂಭಿಸಿದಳು. ಸುಬ್ಬುವಿಗೆ ಪ್ರಪಂಚ ಇನ್ನೂ ಬೆಳಗಲಿಲ್ಲ. ಕರಿಯನು ದನಗಳನ್ನು ಓಡಿಸಿಕೊಂಡು ಹೊಲಕ್ಕೆ ಹೋದನು.

ಸುಬ್ಬುವಿನ ಚಿಕ್ಕ ಅಕ್ಕ ಪಾರ್ವತಿ ಆಗ ಹಾಡಿಕೊಳ್ಳುತ್ತಾ ಬಂದು ಸೇರಿದಳು.

"ಹೊಲೆಯರಿಗೂ ಮೈಲಿಗೆಯವರಿಗೂ ಬಿಡುಗಡೆ" ಯೆನ್ನುವ ಅಭಿಪ್ರಾಯಗಳನ್ನುಳ್ಳ ಸುಬ್ರಹ್ಮಣ್ಯ ಭಾರತಿ ಕವಿಗಳ ಹಾಡನ್ನು ಹಾಡಿಕೊಳ್ಳುತ್ತಾ ಬಂದಳು.

"ಅಮ್ಮಾ—ಪೇಪರನ್ನು ನೋಡಿದೆಯಾ? ಗುಡಿಗಳನ್ನೆಲ್ಲಾ ಹೊಲೆಯರಿಗೆ ತೆರೆದುಬಿಡುವರಂತೆ" ಎಂದು ಹೇಳಿದಳು.

"ಇದೇನು ಅವಸ್ಥೆಯೋ ತಿಳಿಯದು" ಎಂದಳು ಸಾವಿತ್ರಿ.

"ನಿನಗೆ ತಿಳಿಯದೇ ಸಾವಿತ್ರಿ! ಪ್ರಪಂಚವೇ ತಲೆಕೆಳಕಾಗಿ ಹೋಗುತ್ತಾ ಇದೆ" ಎಂದರು ಕೃಷ್ಣಯ್ಯರು.

——::——

## ೬. ದೀಪಾವಳಿಯಲ್ಲಿ ದೇವತೆಗಳ ದರ್ಶನ

ಸುಂದರ ಶೆಟ್ಟಿ ಬಟ್ಟೆ ವ್ಯಾಪಾರಿ. ಸ್ವಲ್ಪ ಮೂಲಧನವನ್ನಿಟ್ಟು ಕೊಂಡು ಆರಂಭ ಮಾಡಿ ತನ್ನ ಶೀಲದಿಂದಲೂ ವಿವೇಕದಿಂದಲೂ ಒಳ್ಳೆಯ ಆಸ್ತಿಯನ್ನು ಸಂಪಾದಿಸಿದನು. ಆತನ ಹೆಂಡತಿಯಾದ ಮೀನಾಕ್ಷಿಯಮ್ಮನು ಬಹಳ ದೈವ ಭಕ್ತಿಯುಳ್ಳವರು. ಪೂರ್ವಕಾಲದ ಆಚಾರಸಂಪ್ರದಾಯ ಗಳನ್ನೂ ಏಕಾದಶಿ ಮೊದಲಾದ ವ್ರತಗಳನ್ನೂ ಕಟ್ಟುನಿಟ್ಟಾಗಿ ನಡೆಸುವ ವರು. ಮಧ್ಯಾಹ್ನ ಊಟ ಮಾಡುವುದಕ್ಕೆ ಮುಂಚೆ ಮನೆಯ ಬಾಗಿಲಿಗೆ ಹೋಗಿ ಕಾಗೆ, ಹಕ್ಕಿಗಳು ಮುಂತಾದುವುಗಳಿಗೆ ಅಕ್ಕಿಯನ್ನು ಎರಚಿ ಅನಂತರವೇ ತಾವು ಊಟಕ್ಕೆ ಕುಳಿತು ಕೊಳ್ಳುವುದು. ಶೆಟ್ಟಿಯವರೂ ತಮ್ಮ ಹೆಂಡತಿಯ ವಿಷಯದಲ್ಲಿ ವಿಶೇಷವಾದ ಗೌರವವನ್ನು ತೋರಿಸು ತ್ತಿದ್ದರು. ಹೆಂಡತಿಯ ಭಾಗ್ಯದಿಂದಲೇ ತಮ್ಮ ವ್ಯಾಪಾರವು ಸರಿಯಾಗಿ ನಡೆಯುತ್ತಿರುವುದೆಂದು ಆತನ ನಂಬಿಕೆ.

"ಜಯ ಸೀತಾರಾಮ್"—ಸನ್ಯಾಸಿಯ ವೇಷ, ತೇಜೋಮಯ ವಾದ ಮುಖ, ಒಂದು ಕೈಯಲ್ಲಿ ದಂಡ, ಮತ್ತೊಂದರಲ್ಲಿ ಕಮಂಡಲ— ಹೀಗೆ ಮಧ್ಯ ವಯಸ್ಸಿನವರೊಬ್ಬರು ಶೆಟ್ಟಿಯವರ ಮನೆಯನ್ನು ಪ್ರವೇಶಿಸಿ ಮೇಲೆ ಹೇಳಿದಂತೆ ಶಬ್ದ ಮಾಡಿದರು.

ಅಂದು ದೀಪಾವಳಿಯ ಹಿಂದಿನ ದಿನ. ಶೆಟ್ಟಿಯವರ ಧರ್ಮಪತ್ನಿ ಎರಡು ಕೈತುಂಬ ಅಕ್ಕಿಯನ್ನು ತೆಗೆದುಕೊಂಡು ಸನ್ಯಾಸಿಯನ್ನು ಎದುರು ಗೊಳ್ಳಲು ಒಳಗಿನಿಂದ ಬಂದರು. "ಅಕ್ಕಿ ಬೇಡ. ಅನ್ನವಿದ್ದರೆ ಹಾಕು." ಎಂದು ಸನ್ಯಾಸಿ ಹೇಳಿದನು.

"ಅಡಿಗೆ ಮುಗಿಯುತ್ತ ಬಂದಿದೆ, ಅರ್ಧ ಘಳಿಗೆ ಕಾಯಬೇಕು." ಎಂದು ಹೇಳಿ ಆಕೆ ಒಂದು ಮಣೆಯನ್ನು ಹಾಕಿ ಕುಳಿತುಕೊಳ್ಳಬೇಕೆಂದು ಹೇಳಿದರು. ಅನಂತರ ಸನ್ಯಾಸಿಯು ಅನ್ನವನ್ನು ತೆಗೆದುಕೊಂಡು "ಅಮ್ಮಾ! ನಿನಗೆ ಯಾವ ಕೊರತೆಯೂ ಇಲ್ಲ, ನೀನು ಪುಣ್ಯವಂತಳು,

ಪತಿವ್ರತೆ. ಒಂದು ಮಂತ್ರವನ್ನು ಹೇಳಿಕೊಡುತ್ತೇನೆ. ಅದನ್ನು ಕಲಿತು ನಾಳೆ ಗಂಗಾಸ್ನಾನವನ್ನು ಮಾಡಿ ಜಪಿಸು. ವಂಶದ ಹಿರಿಯರನ್ನೂ ಸ್ವರ್ಗವಾಸಿಗಳನ್ನೂ ಋಷಿಗಳನ್ನೂ ನಾಳೆ ಕಾಣುವೆ" ಎಂದನು.

ದೊಡ್ಡ ದೈವಭಕ್ತಳಾದ ಶೆಟ್ಟಿಯವರ ಧರ್ಮಪತ್ನಿಗೆ ಆನಂದವು ಉಕ್ಕಿಬಂತು. ಉಪದೇಶವನ್ನು ಪಡೆದಳು. ಮರುದಿನ ಸೂರ್ಯೋದಯಕ್ಕೆ ಮೊದಲೇ ಅಭ್ಯಂಜನ ಮಾಡಿಕೊಂಡು ಮಂತ್ರವನ್ನು ೧೦೦೮ ಸಲ ಸನ್ಯಾಸಿ ಹೇಳಿದ ರೀತಿಯಲ್ಲಿ ಜಪಿಸಿದಳು. ತಕ್ಷಣವೇ ಮನೆಯಲ್ಲಿ ದೊಡ್ಡ ಮಂಗಳಘೋಷ. ಹಜಾರದಲ್ಲಿ ದೊಡ್ಡ ಕೂಟ. ದಿವ್ಯಾಸನಗಳು. ಅವುಗಳ ಮೇಲೆ ಆದಿತ್ಯಜ್ಯೋತಿಯಿಂದ ಕೂಡಿದ ಮುಖಗಳನ್ನುಳ್ಳ ಮಹನೀಯರು.

ತಮ್ಮ ಮುತ್ತಜ್ಜನವರೂ, ಶೆಟ್ಟಿಯವರ ಮುತ್ತಜ್ಜನವರೂ, ಇನ್ನೂ ಅನೇಕರು. ಇವರೊಂದಿಗೆ ವೇಣುವನ್ನು ಕೈಯಲ್ಲಿ ಹಿಡಿದವರೊಬ್ಬರು. ಅವರೇ ಜಗನ್ಮೋಹಕರಾದ ಕೃಷ್ಣದೇವರು. ಪಕ್ಕದಲ್ಲಿ ಬಿಲ್ಲನ್ನಿಟ್ಟಿದ್ದವರೊಬ್ಬರು. ಅವರೇ ಶ್ರೀರಾಮದೇವರು. ಅವರ ಪಕ್ಕದಲ್ಲಿ ಮುದುಕರಾದ ವಶಿಷ್ಠರು. ನೇಗಲೊಂದನ್ನು ಹಿಡಿದಿದ್ದ ಬಲರಾಮ ದೇವರು. ದೊಡ್ಡ ಕೊಡಲಿಯೊಂದನ್ನು ಹೆಗಲಮೇಲೆ ಹೊತ್ತಿದ್ದ ಮತ್ತೊಬ್ಬ ರಾಮದೇವರು. ಬೇರೆ ಕಡೆಯಲ್ಲಿ ಭೀಮ, ಅರ್ಜುನ, ಧರ್ಮಪುತ್ರ—ಇವರೂ ಕುಳಿತಿದ್ದರು. ಹೀಗೆ ಎಲ್ಲಿ ನೋಡಿದರೂ ದೇವತೆಗಳೂ ಋಷಿಗಳೂ ಭಾರತ ದೇಶದ ದಿವ್ಯಜ್ಯೋತಿಪುರುಷರೂ ಒಂದು ಸಲ ದರ್ಶನವನ್ನು ಕೊಟ್ಟವರು ಮತ್ತೊಂದು ಸಲ ಬೇರೊಬ್ಬರಂತೆ ಕಾಣಿಸಿಕೊಳ್ಳುತ್ತಿದ್ದರು. ಎಳ್ಳು ಹಾಕಿದರೆ ಕೆಳಗೆ ಬೀಳದಂತೆ ಹಜಾರದ ತುಂಬ ಗುಂಪು ಕಿಕ್ಕಿರಿದು ಹೋಗಿತ್ತು. ಇದನ್ನು ಮೀನಾಕ್ಷಿಯಮ್ಮನು ನೋಡಿ ಆನಂದಪರವಶಳಾಗಿ "ನಾರಾಯಣಾ—ಓ" ಎಂದು ಕೇಕೆ ಹಾಕಿ ಮೂರ್ಛಿತಳಾದಳು.

ಶೆಟ್ಟಿಯವರು ಮಹಡಿಯಿಂದ ಬಿಡ ಬಿಡ ದುಮ್ಮಿಕ್ಕಿ ಬಂದರು. ಈ ಗುಂಪನ್ನು ನೋಡಿ ಅವರಿಗೆ ಏನೂ ಗೊತ್ತಾಗಲಿಲ್ಲ. "ಇದೇನು ಯಾರೋ ಮನೆಯಲ್ಲಿ ವೇಷವನ್ನು ಹಾಕಿಕೊಂಡು ಬಂದು ದೊಡ್ಡ ಕೂಟವನ್ನು ಮಾಡಿಬಿಟ್ಟಿದ್ದಾರೆ. ಇದು ಯಾರ ಕೆಲಸ?" ಎಂದು ಯೋಚಿಸುತ್ತ

ಸುತ್ತಲೂ ನೋಡಿದರು. ಶೆಟ್ಟಿಯವರು ಬಟ್ಟೆ ವ್ಯಾಪಾರಿಯಾದುದರಿಂದ ಮೊಟ್ಟಮೊದಲು ಬಂದು ಸೇರಿರುವವರ ಉಡುಪನ್ನು ಗಮನಿಸಿದರು. "ಓಹೋ ಇದೊಂದು ಗಾಂಧಿ ಗುಂಪು" ಎಂದು ನಿಶ್ಚಯಿಸಿದರು. ಎಲ್ಲರೂ ಖದ್ದರು ಉಟ್ಟಿದ್ದರು. ಕೆಲವರು ದಪ್ಪನಾದ ಖದ್ದರು, ಕೆಲವರು "ನೈಸ್" ಖದ್ದರು, ಕೆಲವರು ಬರೀ ಖದ್ದರು, ಕೆಲವರು ಅಂಚು ಹಾಕಿದ್ದ ಖದ್ದರು, ಆದರೆ ಎಲ್ಲರೂ, ಖದ್ದರನ್ನೇ ಉಟ್ಟಿದ್ದರು.

"ಸ್ವಾಮಿಗಳೇ! ನೀವೇತಕ್ಕೆ ಇಲ್ಲಿ ಬಂದಿರಿ? ಪೋಲೀಸಿನವರು ಆಕ್ಷೇಪಿಸುವರು" ಎಂದು ಶೆಟ್ಟಿಯವರು ಹೇಳಿದರು. ಗೊಳ್ಳೆಂದು ನಗೆ ಎದ್ದಿತು. "ನಗಬಹುದು, ನೀವು ಸೆರೆ ಮನೆಗೆ ಹೋಗಲು ತಯಾರಾಗಿ ರುವಿರಿ. ನಾನು ತಯಾರಾಗಿಲ್ಲ." ಎಂದು ಮತ್ತೆ ಹೇಳಿದರು. "ನೀವು ಬೇರೆ ಎಲ್ಲಿಯಾದರೂ ಹೋಗಿರಿ. ಪಕ್ಕದ ಮನೆಯಲ್ಲಿ ವಕೀಲರೊಬ್ಬರಿ ರುವರು. ಅಲ್ಲಿ ಹೋಗಿ ಬೇಕಾದ ಆಟವನ್ನು ಹೂಡಿರಿ" ಎಂದರು.

"ಮಗು" ಎಂದು ಹೇಳುತ್ತ ಮುದುಕರೊಬ್ಬರು ಶೆಟ್ಟಿಯವರ ಹತ್ತಿ ರಕ್ಕೆ ಬಂದರು. ಇವರೇ ಸುಂದರ ಶೆಟ್ಟಿಯವರ ಮುತ್ತಜ್ಜನವರು. "ನಾನು ಯಾರೆಂದು ನಿನಗೆ ಗೊತ್ತಾಗಲಿಲ್ಲವೇ. ನಿನ್ನ ತಂದೆ ವಾಸುದೇವನನ್ನು ಪಡೆದ ಸುಂದರನು ನನ್ನ ಮುದ್ದು ಮಗನೇ ಅಲ್ಲವೇ? ಏತಕ್ಕೆ ಭಯ ಪಡುವಿ." ಎಂದು ಶೆಟ್ಟಿಯವರನ್ನು ಆಲಂಗಿಸಿ ಮುದ್ದಿಟ್ಟರು.

"ಎಲ್ಲಾ ಸರಿಯೇ! ಮಹನೀಯರೇ! ಆಟವು ಚೆನ್ನಾಗಿದೆ! ನಿಮ್ಮೆಲ್ಲ ರಿಗೂ ಸಾಷ್ಟಾಂಗ ನಮಸ್ಕಾರ. ದಯಮಾಡಿ ಈ ಮನೆಯನ್ನು ಬಿಟ್ಟು ಹೊರಡಿರಿ. ಈ ಖದ್ದರ್ ಕೂಟವು ಇಲ್ಲಿ ಬೇಡ. ಹಬ್ಬದ ದಿನ. ಪೋಲೀ ಸಿನವರು ಬಂದು ತೊಂದರೆ ಮಾಡಿದರೆ ಚೆನ್ನಾಗಿರುವುದಿಲ್ಲ" ಎಂದು ಶೆಟ್ಟಿ ಯವರು ಕೇಳಿಕೊಂಡರು. "ಅಪ್ಪಾ! ಯಾವುದನ್ನು ಖದ್ದರೆಂದು ಹೇಳು ತ್ತೀಯೆ? ಇದನ್ನು ಬಿಟ್ಟು ಬೇರೆ ಬಟ್ಟೆ ನನಗೆಲ್ಲಿ ಇದೆ? ನಾನು ಭೂಲೋ ಕದಲ್ಲಿದ್ದಾಗಲೂ ಈ ಬಟ್ಟೆಯನ್ನೇ ಹಾಕುತ್ತಿದ್ದೆನು. ಎಲ್ಲರಿಗೂ ಇದೇ ಬಟ್ಟೆಯೇ ಇತ್ತು. ಆ ಕಾಲದಲ್ಲಿ ಸೀಮೆ ಬಟ್ಟೆಯೇ ಊರಲ್ಲಿ ಇರಲಿಲ್ಲವಲ್ಲ! ನಾವು ಏನು ಮಾಡಲಾಗುವುದು? ಆ ಬಟ್ಟೆಯೊಂದಿಗೇ ನಾನು ಸ್ವರ್ಗಕ್ಕೆ

ಹೋದೆನು. ಅಲ್ಲಿ ಬಟ್ಟೆಗಳು ಹರಿಯಲೊಲ್ಲವು. ನಿನ್ನ ಹೆಂಡತಿಯು, ಆ ಪತಿವ್ರತಾ ಶಿರೋಮಣಿಯು, ಕೂಗಿದಳು—ಬಂದೆನು" ಎಂದು ಆ ಮುದುಕರು ನುಡಿದರು.

ಶೆಟ್ಟಿಯವರಿಗೆ ಏನೂ ಗೊತ್ತಾಗಲಿಲ್ಲ. "ಇದೇನೋ ಮೋಸ. ಇದೊಂದು ಕಾಂಗ್ರೆಸ್ ಜನರ ಕೂಟ. ಇಲ್ಲದಿದ್ದರೆ ಹೀಗೆ ಎಲ್ಲರೂ ಖದ್ದರು ಉಟ್ಟಿರುವರೇ ?" ಎಂದು ಮತ್ತೆ ಆಲೋಚಿಸಿದರು. ಕೊನೆಯಲ್ಲಿ ಮುಖ ಮುದ್ರೆಯಿಂದಲೇ ನಂಬಿಕೆಯುಂಟಾಗುವಂತಿದ್ದ ಧರ್ಮಪುತ್ರನ ಬಳಿ ಹೋಗಿ, ದಂಡ ಪ್ರಣಾಮ ಮಾಡಿ ನಿಂತು "ಸ್ವಾಮೀ! ತಮ್ಮನ್ನು ನೋಡಿದರೆ ಮೋಸ ಮಾಡಲಾರಿರಿ ಎಂದು ತೋರುವುದು. ನಿಜವನ್ನು ಹೇಳಿ. ಇದೇನು ವಿಷಯ ?" ಎಂದರು.

"ವತ್ಸಾ! ಮೋಸವೇನೂ ಇಲ್ಲ. ನಾವು ಭೂಲೋಕದಲ್ಲಿದ್ದ ಕಾಲದಲ್ಲಿ ಬಟ್ಟೆಯೆಂದರೆ ಚರಖದ ದಾರದಿಂದ ನೆಯ್ದು ಕೈ ಮಗ್ಗದ ಬಟ್ಟೆಯಷ್ಟೇ ಇತ್ತು. ಅದಕ್ಕೆ ಈಗ ನೀವು ಖದ್ದರೆಂದು ಹೆಸರಿಟ್ಟಿರುವಿರಿ. ಆಗ ನಮಗೆ ಬೇರೆ ಬಟ್ಟೆಯೇ ಇರಲಿಲ್ಲ. ಭಾರತ ರಾಷ್ಟ್ರಕ್ಕೆ ಬೇರೆ ದೇಶಗಳಿಂದ ಬಟ್ಟೆ ಬಂದುದೇ ಇಲ್ಲ. ಊರಲ್ಲಿ ಬೇಕಾದಷ್ಟು ಬಟ್ಟೆ ರಾಶಿರಾಶಿಯಾಗಿತ್ತು. ಅನ್ಯ ದೇಶಗಳಿಗೆ ಕೂಡ ಹಡಗುಗಳ ಮೇಲೆ ಸಾಗಿಸುತ್ತಿದ್ದೆವಲ್ಲಾ! ಆ ಬಟ್ಟೆಯನ್ನೇ ನಾವು ಈಗಲೂ ಉಡುತ್ತಿರುವೆವು. ನೀವೇತಕ್ಕೆ ಅದನ್ನು ಉಡದೆ ಬಿಟ್ಟಿರುವಿರಿ? ದೇಶದಲ್ಲಿ ಬಹಳ ದರಿದ್ರವಂತಲ್ಲಾ!" ಎಂದು ಧರ್ಮಪುತ್ರರು ಹೇಳಿದರು.

ಅನಂತರ ಶೆಟ್ಟಿಯವರು ಧೈರ್ಯವನ್ನು ತಂದುಕೊಂಡು ಒಬ್ಬೊಬ್ಬರಾಗಿ ಎಲ್ಲರ ಬಳಿಗೂ ಹೋಗಿ ಅವರನ್ನು ಮುಟ್ಟಿ ಪರೀಕ್ಷೆ ಮಾಡಿ ನೋಡಿದರು. ಶ್ರೀರಾಮ, ಬಲರಾಮ, ಕೃಷ್ಣ, ಪರಶುರಾಮ, ಭೀಷ್ಮ, ಅರ್ಜುನ, ಯಾರ ಬಟ್ಟೆಯನ್ನು ನೋಡಿದರೂ ಶುದ್ಧ ಖದ್ದರಾಗಿತ್ತು.

"ಇದೇನು ಆಶ್ಚರ್ಯ! ನಾನೇನೋ ಗಾಂಧಿ ಮಾತ್ರ 'ಈ ಬಟ್ಟೆಯನ್ನು ಹಾಕಿಕೊಳ್ಳಿ' ಎಂದು ಕಲಹವನ್ನು ಮಾಡುತ್ತಿರುವರೆಂದು ತಿಳಿದಿದ್ದೆನು! ಈ ಮಹನೀಯರೆಲ್ಲರೂ ಅದನ್ನೇ ಉಟ್ಟಿರುವರಲ್ಲಾ!" ಎಂದು ಶೆಟ್ಟಿಯವರು ಮನಸ್ಸಿನಲ್ಲಿ ಚಿಂತಿಸುತ್ತ ಹೆಂಡತಿಯನ್ನು ನೋಡಿದರು.

ಮೀನಾಕ್ಷಿಯಮ್ಮನವರ ಆನಂದದಿಂದ ಉಂಟಾದ ಮೂರ್ಛೆಯು ಹೋಗಿಯೂ ಹೋಗದೆ ಅವರು ಅರ್ಧಸ್ಮರಣೆಯಲ್ಲಿ ಇರುವಾಗಲೇ "ಹೋಗಿ ಬರುವೆವು" ಎಂದು ಧ್ವನಿ ಎದ್ದಿತು. ಶೆಟ್ಟಿಯವರ ಹಜಾರವು ಬರಿದಾಯಿತು.

ನಮ್ಮ ಪೂರ್ವಿಕರ ಕಾಲದಲ್ಲಿ ನಿಜವಾಗಿಯೂ ಖದ್ದರನ್ನು ಬಿಟ್ಟರೆ ಬೇರೆ ಬಟ್ಟೆಯೇ ಇರಲಿಲ್ಲ. ಈ ಬಟ್ಟೆಯನ್ನೇ ಅವರು ಈಗಲೂ ಸ್ವರ್ಗ ದಲ್ಲಿ ಉಡುತ್ತಿರುವರು. ನಾವೂ ಏತಕ್ಕೆ ಉಟ್ಟು ನೋಡಬಾರದು? ಅದ ರಿಂದ ಪೂರ್ವಕಾಲದ ಉತ್ತಮ ಸ್ಥಿತಿ ದೇಶಕ್ಕೆ ಮತ್ತೆ ಬರುವುದೆಂದೇ ಎಣಿ ಸಲು ಅವಕಾಶವಿದೆ.

---

## ೭. ಜ್ಯೋತಿಷ್ಯವು ಸುಳ್ಳಾಗುವುದೇ ?

ತಿರುವಡಮರದೂರು ಸ್ವಾಮಿನಾಥಯ್ಯರವರು ತೊಂಡಮಂಡಲ ಪ್ರೌಢಶಾಲೆಯಲ್ಲಿ ಹನ್ನೆರಡು ವರ್ಷಗಳಿಂದ ಮುಖ್ಯೋಪಾಧ್ಯಾಯರು. ಅವರ ಧರ್ಮಪತ್ನಿಯಾದ ಅಖಿಲಾಂಡಮ್ಮನೂ ಅವರೂ ಬಹಳ ಸಂತೋಷವಾಗಿ ಸಾಂಸಾರಿಕ ಜೀವನವನ್ನು ನಡೆಯಿಸುತ್ತಿದ್ದರು. ಆದರೆ ಅವರ ಹೆಂಡತಿಗೆ ಒಂದು ದೊಡ್ಡ ಕೊರತೆ—ಮಕ್ಕಳಿಲ್ಲದೆ ಇರುವುದು.

"ಅದರಿಂದ ಏನು, ಅಖಿಲಾ (ಹೀಗೆಯೇ ಸ್ವಾಮಿನಾಥಯ್ಯರವರು ತಮ್ಮ ಹೆಂಡತಿಯನ್ನು ಕರೆಯುವುದು)? ಶಾಲೆಯಲ್ಲಿ ಇನ್ನೂರು ಮಕ್ಕಳಿರುವರು. ಅಷ್ಟು ಹುಡುಗರೂ ನನ್ನ ಮಕ್ಕಳಂತೆಯೇ" ಎನ್ನುವರು.

"ನಿಮಗೇನು ? ಶಾಲೆಯಲ್ಲಿರುವವರೆಲ್ಲರೂ ನಿಮ್ಮ ಮಕ್ಕಳಂತಿರಬಹುದು. ನಾನು ಒಬ್ಬಳಾಗಿ ಮನೆಯಲ್ಲೇ ಅಲ್ಲವೇ ಇರಬೇಕು ? ನನ್ನ ಬಾಳನ್ನು ನೋಡಿರಿ" ಎಂದು ಹೆಂಡತಿ ಹೇಳುವಳು,

ಈ ಕೊರತೆಯು ಬರಬರುತ್ತ ಅಖಿಲಾಂಡಮ್ಮನಿಗೆ ಹೆಚ್ಚಾದುದನ್ನು ನೋಡಿ ಸ್ವಾಮಿನಾಥಯ್ಯರವರು ಯಾತ್ರೆ ಮಾಡಲು ತೀರ್ಮಾನಿಸಿದರು. ಶಾಲೆಯ ಅಧಿಕಾರಿಗಳಿಂದ ಎರಡು ತಿಂಗಳು ರಜಾ ಪಡೆದುಕೊಂಡು ದಕ್ಷಿಣ ದೇಶದಲ್ಲಿರುವ ಪಳನಿ, ರಾಮೇಶ್ವರ ಮೊದಲಾದ ಸ್ಥಳಗಳನ್ನು ನೋಡಿಕೊಂಡು ಮೈಸೂರು ದೇಶದಲ್ಲಿ ಪುತ್ರಸಂತಾನ ಕೊಡುವುದರಲ್ಲಿ ಹೆಸರುವಾಸಿಯಾದ ವಿದುರಾಶ್ವತ್ಥ ಕ್ಷೇತ್ರದಲ್ಲಿ ಅಶ್ವತ್ಥ ಪ್ರದಕ್ಷಿಣೆ ಮಾಡಿ ಊರಿಗೆ ಹಿಂತಿರುಗಿದರು. ಅವರ ಜಾತಕವನ್ನು ನೋಡಿ ಒಬ್ಬ ತೆಲುಗು ಜ್ಯೋತಿಷ್ಕರು ಹೇಳಿದ್ದ ಸಮಯಕ್ಕೆ ಸರಿಯಾಗಿ ಅಖಿಲಾಂಡಮ್ಮನು ಗರ್ಭವತಿಯಾದಳು.

"ಜ್ಯೋತಿಷ್ಯವೂ ಸುಳ್ಳಾಗುವುದೇ ?" ಎಂದರು. ಸ್ವಾಮಿನಾಥಯ್ಯ ರವರು. ಆದರೆ ಅಖಿಲಾಂಡಮ್ಮನು ಅಶ್ವತ್ಥ ಗಿಡದ ಪೂಜೆಯಿಂದಲೇ ಈ ಭಾಗ್ಯವು ಲಭಿಸಿತೆಂದು ಹೇಳುವರು. ಹೇಗಾದರೂ ಸರಿ, ಸುಖ ಪ್ರಸವವಾಗಿ ಎಲ್ಲವೂ ಸುಖಮಯವಾದರೆ ಪಳನಿಗೆ ಮತ್ತೊಂದು ಸಲ ಹೋಗುವುದಾಗಿ ಹರಸಿಕೊಂಡು ದಿನಗಳನ್ನು ಲೆಕ್ಕ ಹಾಕುತ್ತಿದ್ದರು.

ಬಹಳ ವರ್ಷಗಳಾದ ಮೇಲೆ ಗರ್ಭವತಿಯಾದುದರಿಂದ ಸ್ವಲ್ಪ ಜಾಗ್ರತೆಯಾಗಿಯೇ ಇರಬೇಕೆಂದು ಸ್ವಾಮಿನಾಥಯ್ಯರವರ ಸ್ನೇಹಿತರು ಕೆಲವರು ಹೇಳಿದರು ಹೆರಿಗೆಗೆ ಎಳುಂಬೂರಿನ ಆಸ್ಪತ್ರೆಯಲ್ಲಿ ಹೋಗಿರುವುದೇ ಮೇಲೆಂದು ಅವರೆಲ್ಲರೂ ಆಲೋಚನೆಯನ್ನು ಹೇಳಿದರು. ಅಖಿಲಾಂಡಮ್ಮನ ತಾಯಿ ಬಹಳ ದಿನಗಳಿಗೆ ಹಿಂದೆಯೇ ಸ್ವರ್ಗಸ್ಥಳಾಗಿದ್ದಳು. ಅತ್ತೆ ಒಬ್ಬಳಿದ್ದಳು. ಅವಳ ಬರುವಿಕೆಯನ್ನು ಎದುರು ನೋಡುತ್ತಿದ್ದರು. ಆದರೆ ಏನೋ ಕಾರಣದಿಂದ ಅವಳು ಬರುವುದಕ್ಕಾಗಲಿಲ್ಲ. ಸರಿಯಾದ ಸಹಾಯವಿಲ್ಲದುದರಿಂದ ಹೆರಿಗೆಗೆ ಆಸ್ಪತ್ರೆಗೆ ಹೋಗುವುದೇ ಸರಿಯೆಂದು ತೀರ್ಮಾನವಾಯಿತು.

ಯಾವ ಕಷ್ಟವೂ ಇಲ್ಲದೆ ಸರಿಯಾದ ಕಾಲಕ್ಕೆ ಪ್ರಸವವಾಯಿತು. ಸ್ವಾಮಿನಾಥಯ್ಯರವರ ಸಂತೋಷವನ್ನು ಹೇಳಬೇಕಾಗಿಲ್ಲ. ಆಸ್ಪತ್ರೆಯ ಸಿಬ್ಬಂದಿಗಳಿಗೆ ಹಣವನ್ನು ಧಾರಾಳವಾಗಿ ಎರಚಿಬಿಡಬೇಕೆಂದು ಉದ್ದೇಶಿಸಿದರು.

ಕೂಸು ರಾತ್ರಿ ಒಂಬತ್ತು ಘಂಟೆಗೆ ಹುಟ್ಟಿತು. ವಾಮೂಲಿನಂತೆ ಕೂಡಲೇ ಸ್ನಾನ ಮಾಡಿಸಿ ತೂಕವನ್ನು ತೆಗೆದು ಗುರುತು ಹಾಕಲು ಹೆರಿಗೆ ಮನೆಯಲ್ಲಿದ್ದ ದಾದಿ ಕೂಸನ್ನೆತ್ತಿಕೊಂಡು ಹೋದಳು. ಇದಕ್ಕಾಗಿ ಆಸ್ಪತ್ರೆಯಲ್ಲಿ ಒಂದು ಬೇರೆ ಸ್ಥಳ. ಅದೇ ಸಮಯದಲ್ಲಿ ಒಟ್ಟು ಮೂರು ಕೂಸುಗಳು ಆಸ್ಪತ್ರೆಯಲ್ಲಿ ಹುಟ್ಟಿದ್ದವು. ದಾದಿಗಳೆಲ್ಲರಿಗೂ ಮಹಾ ಉತ್ಸಾಹ. ತಮಗೇ ಪುತ್ರೋತ್ಸವವಾದಂತೆ ಅವರು ಹಿಗ್ಗಿ ಕುಣಿದಾಡಿದರು.

ಮೂರು ಕೂಸುಗಳಿಗೂ ಮಾಡಬೇಕಾದುದೆಲ್ಲವನ್ನೂ ಮಾಡಿದರು.

ಪ್ರತಿಯೊಂದು ಕೂಸಿನ ಸೊಂಟದಲ್ಲೂ ಒಂದು ನಂಬರಿನ ಚೀಟಿ ಕಟ್ಟುವುದು ಪದ್ಧತಿ. ಇಲ್ಲದೆ ಹೋದರೆ ಆಸ್ಪತ್ರೆಗಳಲ್ಲಿ ಹುಟ್ಟಿದ ಮಕ್ಕಳು ಬದಲಾಗಿ ಬಿಡುವವಲ್ಲವೇ ?

ಮೂರು ಮಕ್ಕಳಲ್ಲಿ ಒಂದು ಕಪ್ಪು, ಉಳಿದ ಎರಡು ಒಂದೇ ರೀತಿಯ ತಿಳಿ ಬಣ್ಣ—ಸುಮಾರು ಒಂದೇ ತೂಕ.

ಅಖಿಲಾಂಡಮ್ಮನ ಕೂಸನ್ನು ಎತ್ತಿಕೊಂಡು ಬಂದ ದಾದಿ ಅದನ್ನು ಅಲ್ಲಿದ್ದ ಇತರ ದಾದಿಗಳಿಗೆ ಒಪ್ಪಿಸಿ ಏನೋ ಕೆಲಸವಾಗಿ ಬೇರೆ ಸ್ಥಳಕ್ಕೆ ಹೊರಟುಹೋದಳು.

ಮುಂದಾಗಿಯೇ ಚೀಟಿಯನ್ನು ಕಟ್ಟುವುದು ಪದ್ಧತಿ. ಹಾಗೆ ಮಾಡದೆ ಹರಟೆ ಹೊಡೆಯುವುದರಲ್ಲಿ ಮರೆತಿದ್ದರಿಂದ ಅಲ್ಲಿದ್ದ ದಾದಿಗಳಿಗೆ ಯಾವುದು ಅಖಿಲಾಂಡಮ್ಮನ ಕೂಸು, ಯಾವುದು ಮತ್ತೊಬ್ಬರದು ಎನ್ನುವುದರಲ್ಲಿ ಸಂದೇಹ ಉಂಟಾಯಿತು. ಕಪ್ಪಾಗಿದ್ದ ಕೂಸಿನ ವಿಷಯದಲ್ಲಿ ಏನೂ 'ತಕರಾರಿ'ಲ್ಲ. ಉಳಿದ ಎರಡು ಕೂಸುಗಳ ವಿಚಾರದಲ್ಲಿ ಒಂದು ಬಗೆಯಾಗಿ ತೀರ್ಮಾನಿಸಿಕೊಂಡು ಚೀಟಿಗಳನ್ನು ಕಟ್ಟಿಬಿಟ್ಟರು.

ಅಖಿಲಾಂಡಮ್ಮನು ಸ್ವಲ್ಪ ಬಿಳುಪು. ಎಂಟನೆಯ ವಾರ್ಡಿನಲ್ಲಿ ಮಲಗಿದ್ದ ಮುಸಲ್ಮಾನ ಹೆಂಗಸು ಸ್ವಲ್ಪ ಕಪ್ಪು. ಕೂಸುಗಳು ಹಾಗೆಯೇ ಇರುವವೆಂದು ದಾದಿಗಳು ತೀರ್ಮಾನಿಸಿದರು. ಸ್ವಲ್ಪ ಹೆಚ್ಚು ಬಿಳುಪಾಗಿದ್ದ ಕೂಸನ್ನು ಅಖಿಲಾಂಡಮ್ಮನ ಬಳಿ ತೆಗೆದುಕೊಂಡು ಹೋಗಿ ಒಪ್ಪಿಸಿ ಬಿಟ್ಟರು. ಒಂದು 'ತಕರಾರೂ' ಉಂಟಾಗಲಿಲ್ಲ.

"ಎಷ್ಟು ಸುಂದರವಾಗಿದೆ! ನಿಮ್ಮ ಕೂಸು ಏಳು ಪೌಂಡು ತೂಕ. ಇದು ನಿಮ್ಮ ಮೊದಲನೆಯ ಕೂಸೇ ?" ಎಂದಳು ದಾದಿ. ಅವಳು ಫ್ರೆಂಚ್ ಹೆಂಗಸು,

ಆ ಸಮಯದಲ್ಲಿ ಅಲ್ಲಿಯೇ ಇದ್ದ ಸ್ವಾಮಿನಾಥಯ್ಯರವರು "ಹೌದು" ಎಂದರು. ಹೀಗೆಂದು ಹೇಳಿ ಹೆಂಡತಿಯನ್ನು ನೋಡಿದರು. ಅವಳು ಸೊರಗಿ ಮಲಗಿದ್ದಳು. ಅವಳ ಅಂತರಂಗದ ಸಂತೋಷವು ಮುಖದಲ್ಲಿ ಮುಗುಳ್ನಗೆಯಾಗಿ ಅರಳಿತು. ತನ್ನ ಬಾಳು ಫಲಪ್ರದವಾಯಿತೆಂದು ಅವಳಿಗೆ ಆಗ ಉಂಟಾದ ಆನಂದಕ್ಕೆ ಪಾರವಿಲ್ಲ.

"ಕೂಸು ದೃಢವಾಗಿದೆಯೋ ? " ಎಂದರು.

"ಓ, ಈ ಹೊತ್ತು ಹುಟ್ಟಿದ ಮೂರು ಕೂಸುಗಳಲ್ಲಿ ಇದೇ ಶ್ರೇಷ್ಠವಾದುದು." ಎಂದಳು ದಾದಿ.

ಇದನ್ನೂ ಸ್ವಾಮಿನಾಥಯ್ಯರವರು ಅಖಿಲಾಂಡಮ್ಮನಿಗೆ ತಮ್ಮ ಸ್ವಂತ ಭಾಷೆಯಲ್ಲಿ ಹೇಳಿದರು.

ಇಷ್ಟು ಹೊತ್ತಿಗೆ ಕೂಸನ್ನು ಮೊದಲು ತೆಗೆದುಕೊಂಡು ಹೋಗಿದ್ದ ದಾದಿ ಬಂದಳು. ಅವಳೂ ಕೂಸನ್ನು ಎತ್ತಿ ಮುದ್ದಾಡಿ ದಾದಿಯರಿಬ್ಬರೂ ಹೊರಕ್ಕೆ ಹೋದರು.

"ಹೊಕ್ಕಳಿನ ಬದಿಯಲ್ಲಿ ಒಂದು ಮಚ್ಚೆಯಿತ್ತಲ್ಲಾ - ಅದು ಹೇಗೆ ಇಷ್ಟು ಬೇಗ ಮಾಸಿಹೋಯಿತು. ? " ಎಂದಳು ಮೊದಲನೆಯ ದಾದಿ.

"ಅವೇ ಇವಳ ಕೂಸು ? ಅದು ಎಂಟನೆಯ ವಾರ್ಡಿಗೆ ಹೋಗಿ ಬಿಟ್ಟಿದೆಯಲ್ಲವೇ ! ಅದು ಮುಸಲ್ಮಾನ ಹೆಂಗಸಿನ ಕೂಸೆಂದೆಣಿಸಿ ಚೀಟಿಯನ್ನು ಕಟ್ಟಿದೆವು." ಎಂದಳು ಎರಡನೆಯ ದಾದಿ.

ಮೊದಲನೆಯ ದಾದಿ: "ಸರಿ, ಇನ್ನು ಮಾತಾಡಬೇಡ ಸುಮ್ಮನಿರು"

ಎರಡನೆಯ ದಾದಿ : "ಛೀ ! ಪಾಪ ! ನಿನ್ನ ಜ್ಞಾಪಕ ಸರಿಯಾಗಿದ್ದರೆ ಬದಲು ಮಾಡಬಹುದಲ್ಲಾ." ಎಂದಳು.

ಮೊದಲನೆಯ ದಾದಿ : "ಹುಚ್ಚಿ ! ಹಾಗೆಲ್ಲ ಮಾಡಿದರೆ ಗಲಾಟೆಯಾಗುವುದು. ನಮ್ಮ ಕೆಲಸವೇ ಹೋಗುವುದು. ಇಬ್ಬರು ತಾಯಂದಿರಿಗೂ ಸಂದೇಹವೂ ಮನೋವ್ಯಥೆಯೂ ಉಂಟಾಗುವುದು. ಮಾತಾಡದೆ ಇರು " ಎಂದಳು.

ಹಾಗೆಯೇ ಯಾವ ಚಿಂತೆಯೂ ಇಲ್ಲದೆ ಹನ್ನೆರಡು ದಿನಗಳು ಆಸ್ಪತ್ರೆಯಲ್ಲಿದ್ದು ಆಂಡರ್ಸನ್ ಬೀದಿಯಲ್ಲಿ ಅಬ್ದುಲ್ ತಯಾಬ್ಜಿ ಸೇಟಿನ ಹೆಂಡತಿಯೂ ತಿರುವಲ್ಲಿಕೇಣಿಯಲ್ಲಿ ಅಖಿಲಾಂಡಮ್ಮನೂ ತಮ್ಮ ತಮ್ಮ ಮನೆಗೆ ಹೋಗಿ ಸೇರಿದರು. ಮಕ್ಕಳಿಬ್ಬರೂ ಬಹಳ ಆದರದಿಂದ ಬೆಳೆಸಲ್ಪಟ್ಟರು. ಸೇಟಿನ ಮನೆಯಲ್ಲಿ ಬೇಕಾದಷ್ಟು ಐಶ್ವರ್ಯವೂ ಸೌಕರ್ಯವೂ ಸ್ವಾಮಿನಾಥ

ಯ್ಯರವರ ಮನೆಯಲ್ಲಿಯಾದರೋ ಅಮಿತವಾದ ಪ್ರೀತಿಯೂ ಸಂತೋಷವೂ ತುಂಬಿ ಸೇಟಿನ ಮನೆಯ ಕೂಸಿಗೆ ಏನೂ ಕಡಿಮೆಯಿರಲಿಲ್ಲ, ಉಪಾಧ್ಯಾಯರು ತಮ್ಮ ಕೂಸಿನ ವಿಷಯದಲ್ಲಿ ತೋರಿಸಿದ ಆಶೆ ಅಕ್ಕರೆಗಳು ಅಷ್ಟಿಷ್ಟಲ್ಲ.

ಕೂಸಿಗೆ ಒಂದು ತಿಂಗಳಾದಮೇಲೆ ಅಖಿಲಾಂಡಮ್ಮನ ಅತ್ತೆ ಬಂದಳು. ಕೂಸಿನ ಕಣ್ಣು ತನ್ನ ಅಣ್ಣನಾದ ಮುತ್ತುಸ್ವಾಮಿಯ ಕಣ್ಣೇ ಪ್ರತ್ಯಕ್ಷ ವಾದಂತಿದೆಯೆಂದಳು. ಮೂಗು ಮಾತ್ರ ಸ್ವಾಮಿನಾಥಯ್ಯರವರ ಮನೆಯದು ಎಂದಳು. ಇದರಲ್ಲಿ ಸ್ವಾಮಿನಾಥಯ್ಯರಿಗೆ ಸ್ವಲ್ಪ ತೃಪ್ತಿ. ಎರಡರಲ್ಲಿಯೂ ತೃಪ್ತಿ ಅಖಿಲಾಂಡಮ್ಮನಿಗೆ.

ತಯಾಬ್ಜಿ ಸೇಟಿನ ಮನೆಯಲ್ಲಿಯೂ ಹೀಗಿಯೇ. ಆದರೆ ಅಲ್ಲಿ ನಡೆದ ಸಂಭಾಷಣೆಗಳನ್ನು ನಾನು ಪ್ರತ್ಯಕ್ಷವಾಗಿ ಕೇಳಲಿಲ್ಲ.

ಇಪ್ಪತ್ತೆರಡು ವರ್ಷಗಳಾದ ಮೇಲೆ ಈ ಅಬ್ದುಲ್ ತಯಾಬ್ಜಿ ಸೇಟ್ ತೀರಿಹೋಗಿ ಮಗನಾದ ಸುಲೇಮಾನ್ ಸೇಟ್ ಸಣ್ಣ ವಯಸ್ಸಿನಲ್ಲಿಯೇ ಬಹಳ ಸಾಮರ್ಥ್ಯದಿಂದ ತಂದೆಯವರು ಇಟ್ಟು ಹೋದ ದೊಡ್ಡ ಆಮದಿನ ವ್ಯಾಪಾರವನ್ನು ನಡೆಯಿಸುತ್ತ ಇರುವನು.

ಸ್ವಾಮಿನಾಥಯ್ಯರವರ ಮಗನ ಹೆಸರು ಅಶ್ವತ್ಥನಾರಾಯಣ. ಎಸ್. ಎಸ್. ಎಲ್. ಸಿ. ಗೆ ಮೇಲೆ ಏನು ಕಷ್ಟಪಟ್ಟರೂ ಅವನ ಓದು ಹತ್ತಲಿಲ್ಲ. ಬೊಂಬಾಯಿಗೆ ಹೋಗಿ, ಎರಡು ತಿಂಗಳು ಸ್ನೇಹಿತರೊಡನೆ ಇದ್ದುಕೊಂಡು, ಶಿಫಾರಸುಗಳನ್ನು ಸಂಪಾದಿಸಿ ಎಲ್ಲೆಲ್ಲಿ ಹುಡುಕಿ ನೋಡಿದರೂ ಕೆಲಸ ವೊಂದೂ ಸಿಕ್ಕದೆ ಹಿಂತಿರುಗಿ ಬಂದನು. ಅವನ ವಿಷಯಲ್ಲಿ ಸ್ವಾಮಿನಾಥಯ್ಯರವರಿಗೆ ಯಾವಾಗಲೂ ಚಿಂತೆ. ತೆಲುಗು ಜ್ಯೋತಿಷ್ಕನು ಬರೆದು ಕೊಟ್ಟದ್ದರಲ್ಲಿ "ಮಗನು ದೊಡ್ಡ ವ್ಯಾಪಾರಿಯಾಗುವನು; ಭಾಗ್ಯಶಾಲಿ; ಆದರೆ ತಂದೆತಾಯಿಗಳಿಗೆ ಯಾವ ಪ್ರಯೋಜನವೂ ಇಲ್ಲ" ಎಂದಿತ್ತು.

"ನನಗೂ ನಿನಗೂ ಯಾವ ಪ್ರಯೋಜನಕ್ಕೂ ಬಾರದಿದ್ದರೂ ಅವನ ಪಾಟ್ಟಿಗೆ ಚೆನ್ನಾಗಿದ್ದರೆ ಸಾಕಲ್ಲಾ. ಜ್ಯೋತಿಷ್ಯವೆಲ್ಲವೂ ಸುಳ್ಳೇ?" ಎಂದರು ಸ್ವಾಮಿನಾಥಯ್ಯರವರು

" ಸುಳ್ಳೆಂದು ಹೇಳಲಾಗುವುದೇ ? ಬರೆದು ಕೊಟ್ಟಂತೆ ಕೂಸು ಹುಟ್ಟಲಿಲ್ಲವೇ ? ಭಗವಂತನು ಬರೆದುದು ಸುಳ್ಳಾಗುವುದೇ ? ಮುಂದೆ ಏನು ಬರುತ್ತೆ, ಏನು ಬರುವುದಿಲ್ಲವೆಂದು ಯಾರಿಗೆ ಗೊತ್ತು ? ಒಬ್ಬ ಶೆಟ್ಟಿಯ ಹತ್ತಿರ ಸೇರಿಸಿ ನೋಡಿ. ವ್ಯಾಪಾರದಲ್ಲಿ ಗಟ್ಟಿಗನಾದರೂ ಆಗಬಹುದು " ಎಂದಳು ಅಖಿಲಾಂಡಮ್ಮ.

ಜ್ಯೋತಿಷ್ಯ ಸುಳ್ಳಾಗುವುದೇ ?

ಹೇಗೆ ಆಗಲಿ ಅನಾವಶ್ಯಕವಾಗಿ ಆಸ್ಪತ್ರೆಗೆ ಹೋಗದೆ ಹೆರಿಗೆಗಳು ಮನೆಯಲ್ಲಿಯೇ ನಡೆಯುವುದು ಕ್ಷೇಮ.



# ೮. ಪಟಾಕಿ ಕಟ್ಟು

## ೧

" ಅಪ್ಪಾ, ಪಟಾಕಿ " ಎಂದು ಬೀರಯ್ಯನ ಮಗನು ಅತ್ತರೆ ಬೀರನು ಎಲ್ಲಿಂದ ಪಟಾಕಿ ತಂದು ಕೊಡಲು ಸಾಧ್ಯ? ಅಗ್ರಹಾರದಲ್ಲಿಯೂ ಮೊದಲಿಯಾರರ ಬೀದಿಯಲ್ಲಿಯೂ ಮಕ್ಕಳು ದೀಪಾವಳಿಗೆ ಮೂರು ದಿನಗಳ ಹಿಂದೆಯೇ ಪಟಾಕಿಗಳನ್ನು ಸುಡಲಾರಂಭಿಸಿದರು. ಬೀರನ ಮಗನು ಬೀದಿಯಲ್ಲಿ ನಾಲ್ಕು ಮಾರು ದೂರ ಆಚೆ ನಿಂತು ನೋಡುತ್ತಿದ್ದನು. ಸಿಡಿದು ಮದ್ದಾರಿ ಹೋದ ಪಟಾಕಿಗಳನ್ನು ಆರಿಸಲು ಹೋದರೆ, " ಹೋಗು " ಎಂದು ಗದರಿಸಿ ಓಡಿಸಿದರು.

ಮರುದಿನ ಊರಿನ ಹಲವು ಮನೆಗಳಲ್ಲಿ "ಪಟ್" "ಪಟ್" "ಪಟ್" ಎಂದು ಪಟಾಕಿಯ ಶಬ್ದವೆದ್ದಿತು. ಬೀರನ ಮಗನಿಗೆ ತಡೆಯಲಾರದಷ್ಟು ಆಸೆ. ಏತಕ್ಕೆ ಎಲ್ಲರ ಮನೆಯಲ್ಲಿಯೂ ಪಟಾಕಿ, ತನ್ನ ಅಪ್ಪನ ಮನೆಯಲ್ಲಿ ಮಾತ್ರ ಇಲ್ಲ ಎಂದು ತನ್ನ ಮನಸ್ಸಿನಲ್ಲಿ ತೋರಿದ ಪ್ರಶ್ನೆಗಳಿಗೆ ಉತ್ತರಗಳು ಸಿಗುತ್ತಿರಲಿಲ್ಲ. ಅಪ್ಪನನ್ನು ಕೇಳುವುದೆಂದರೆ ಅವನಿಗೆ ಭಯ.

ಕೇರಿಗೆ ತಿರುಗಿ ಹೋಗುವುದಕ್ಕೇ ಅವನಿಗೆ ಮನಸ್ಸಾಗಲಿಲ್ಲ. ಹಸಿವಾಗುತ್ತಿದ್ದರೂ ಬಹಳ ಹೊತ್ತು ಊರಿನ ಮಕ್ಕಳು ಪಟಾಕಿ ಸುಡುವುದನ್ನು ನೋಡುತ್ತಲೇ ನಿಂತಿದ್ದನು.

ಬೀದಿಯಲ್ಲಿ ಹೋಗುವ ಅಯ್ಯರೊಬ್ಬರು "ಆಚೆ ನಿಲ್ಲು" ಎಂದರು. ಬೀರನ ಮಗನು ನಡುಗುತ್ತ ಓಡಿಹೋಗಿ ಒಂದು ಸಂದಿಯಲ್ಲಿ ಗೋಡೆಯನ್ನಪ್ಪಿಕೊಂಡು ಮರೆಯಾಗಿ ನಿಂತನು.

ಏತಕ್ಕೆ ಹೀಗೆ ಮರೆಯಾಗಬೇಕೆನ್ನುವ ಪ್ರಶ್ನೆ, ಬೀರನ ಮಗನಿಗೆ ತೋರಿತೋ, ಇಲ್ಲವೊ, ನಾವು ಹೇಳಲು ಹೇಗೆ ಸಾಧ್ಯವಾದೀತು ? ಮಕ್ಕಳ

ಮನಸ್ಸಿನಲ್ಲಿ ತೋರುವ ಭಾವನೆಗಳು ಯಾರಿಗೆ ಗೊತ್ತು ? ಪಕ್ಕದಲ್ಲಿ ಒಂದು ನಾಯಿಮರಿ. ಅದೇ ತನ್ನ ಗೆಳೆಯನೆಂದು ಅದರ ಮೈಯನ್ನು ಮೆತ್ತಗೆ ಸವರುತ್ತ ಆ ಅಯ್ಯರು ಹೋಗುವವರೆಗೂ ಅಲ್ಲೇ ಇದ್ದು ಅನಂತರ ಹೊರಕ್ಕೆ ಬಂದನು.

ಬಹಳ ಹೊತ್ತಾದ ಮೇಲೆ ಕೇರಿಯಲ್ಲಿದ್ದ ತನ್ನ ಗುಡಿಸಿಲಿಗೆ ಹೋದನು.

"ಅಪ್ಪಾ, ನನಗೆ ಪಟಾಕಿ ತಂದು ಕೊಡಲಾರೆಯಾ ?" ಎಂದು ಬೀರನನ್ನು ಕೇಳಿದನು. 'ಪಳ್' ಎಂದು ಕೆನ್ನೆಗೆ ಒಂದು ಏಟು ಬಿತ್ತು. ಹುಡುಗನು ಗಿರ್ರೆಂದು ಸುತ್ತಿ ಕೆಳಕ್ಕೆ ಬಿದ್ದನು.

"ಕುಡಿದು ಬಿಟ್ಟು ಏತಕ್ಕೆ ಮಗುವನ್ನು ಹೊಡೆಯುತ್ತೀಯ ?" ಎಂದು ತಾಯಿ ಚೀರುತ್ತ ಬಂದಳು. "ಹೆಂಡಕ್ಕೆ ತೆತ್ತಿರುವ ಕಾಸಿನಲ್ಲಿ ಮಗುವಿಗೆ ಒಂದು ಕಟ್ಟು ಪಟಾಕಿಯಾದರೂ ತರಬಾರದಾಗಿತ್ತೇ ? ಕೇಳಿದ್ದೇ ತಪ್ಪೇ ? ಏತಕ್ಕೆ ಹೊಡೆದು ಕೊಲ್ಲುತ್ತೀಯ" ಎಂದು ಮಗುವಿನ ಬಳಿಗೆ ಓಡಿ ಹೋಗಿ ಅದನ್ನು ಎತ್ತಿಕೊಂಡಳು.

"ಅಮ್ಮಾ, ಪಟಾಕಿ" ಎಂದನು ಮತ್ತೊಂದು ಸಲ.

"ಸುಮ್ಮನಿರು, ಹೊಲೆಯರ ಹುಡುಗನಿಗೆ ಪಟಾಕಿ ಏತಕ್ಕೆ" ಎಂದು ತಾಯಿ ಹೇಳಿ ಒಲೆಯ ಹತ್ತಿರ ಹೋಗಿಬಿಟ್ಟಳು.

"ಮತ್ತೆ ಕೇಳಿದರೆ ಕೊಂದುಬಿಡುತ್ತೇನೆ, ಗೊತ್ತೇ" ಎಂದು ಬೀರಯ್ಯ ಹೆದರಿಸಿದನು.

೨

ದೊರೆಸ್ವಾಮಿ ಅಯ್ಯಂಗಾರ್ ಮನೆಯಲ್ಲಿ ಬಹಳ ಗಡಿಬಿಡಿ. ಅಳಿಯಂದಿರು ಪಟ್ಟಣದಿಂದ ಪೆಟ್ಟಿಗೆ ಹಾಸಿಗೆಯ ಸಹಿತ ಬಂದು ಇಳಿದರು. ಇವರು ದೊರೆಸ್ವಾಮಿ ಅಯ್ಯಂಗಾರ್ರವರ ಮೂರನೆಯ ಮಗಳನ್ನು ಮದುವೆಯಾಗಿದ್ದರು. ಹೆಸರು ಶೆಲ್ಲಮ್ ಅಯ್ಯಂಗಾರ್, ಬಿ.ಎ. ಕಳೆದ ಚೈತ್ರದಲ್ಲಿ ಮದುವೆ ಬಹು ಸಂಭ್ರಮವಾಗಿ ನಡೆಯಿತು. ನಾಲ್ಕು ಸಾವಿರ ರೂಪಾಯಿ ಖರ್ಚು. ಇದೇ ಮೊದಲನೆಯ ದೀಪಾವಳಿ. ಮೈದುನಂದಿರಾದ ಹುಡುಗರಿಗೆಲ್ಲಾ

ತೆಗೆದುಕೊಂಡು ಬಂದಿದ್ದ ಇಪ್ಪತ್ತು ಪಟಾಕಿ ಕಟ್ಟುಗಳನ್ನೂ ಮತಾಪು ಗಳನ್ನೂ ಅವರಿಗೆ ಕೊಟ್ಟು ಅತ್ತೆಯನ್ನು ನೋಡಲು ಹೋದರು. ಕಿಟ್ಟು, ಶೀನು ಏಳು ಮತ್ತು ನಾಲ್ಕು ವರ್ಷ ವಯಸ್ಸಿನ ಹುಡುಗರು. ಇಬ್ಬರೂ ಪಟಾಕಿ ಕಟ್ಟುಗಳನ್ನು ಹಂಚಿಕೊಂಡರು. ಹಳದಿಯ ಕಟ್ಟುಗಳೇ ತನಗೆ ಬೇಕೆಂದು ಶೀನು ಅತ್ತನು. ಕಿಟ್ಟು ಕೊಡಲಾರೆನೆಂದು ಜಗಳವಾಡಿದನು.

"ಪಾಪ ! ಕೂಸಿಗೆ ಹಳದಿಯ ಕಟ್ಟು ಕೊಡೋ" ಎಂದಳು ಕಮಲ. ಇವಳೇ ಮದುವೆಯಾದ ಹುಡುಗಿ.

ಅನಂತರ ಹುಡುಗರಿಗೆ ಸಮಾಧಾನ ತಂದು "ಈಗ ಸುಡಕೂಡದು. ನಾಳೆಯೇ ದೀಪಾವಳಿ. ಎಣ್ಣೆಯನ್ನು ಹಚ್ಚಿಕೊಂಡು ಸ್ನಾನ ಮಾಡಿದ ಮೇಲೆ ಸುಡಬಹುದು "ಎಂದು ಹೇಳಿ ಕಮಲ ತಾಯಿಯ ಬಳಿ ಹೋದಳು.

"ಈಗಲೇ ಸುಡುತ್ತೇನೆ" ಎಂದನು ಕಿಟ್ಟು.

"ನಾನು ಬಿಡಲಾರೆ" ಎಂದನು ಶೀನು.

"ನಾನು ಒಂದು ಕಟ್ಟು ಈಗ ಹೊತ್ತಿಸಿಬಿಟ್ಟು ಉಳಿದುದನ್ನು ನಾಳೆಗೆ ಇಟ್ಟುಕೊಳ್ಳುತ್ತೇನೆ." ಎಂದನು ಕಿಟ್ಟು.

ಇಬ್ಬರೂ ಪಟಾಕಿ ಕಟ್ಟುಗಳನ್ನು ಎತ್ತಿಕೊಂಡು ತಾಯಿಯ ಬಳಿಗೆ ಹೋದರು.

"ಅಮ್ಮಾ ! ಭದ್ರವಾಗಿ ಇಟ್ಟಿರು" ಎಂದು ಶೀನು ತನ್ನ ಪಾಲಿನ ಕಟ್ಟುಗಳನ್ನು ತಾಯಿಯ ಮಡಲಿನಲ್ಲಿ ಹಾಕಿದನು. ಅಳಿಯನು ಬಂದಿರುವ ಆನಂದಸಾಗರದಲ್ಲಿ ಮುಳುಗಿದ್ದ ಸೀತಮ್ಮನು ಮಗುವನ್ನು ಎತ್ತಿ ಮುದ್ದಾಡಿ "ಶೀನು ಒಳ್ಳೆಯ ಹುಡುಗ" ಎಂದು ಹೇಳಿ ಎದ್ದು ಬೆಳ್ಳಿ ಸಾಮಾನುಗಳು ಇಟ್ಟಿದ್ದ ಅಲಮಾರಿನಲ್ಲಿ ಪಟಾಕಿ ಕಟ್ಟುಗಳನ್ನು ಇಟ್ಟು ಅಳಿಯನೊಂದಿಗೆ ಮಾತಾಡಲು ಹೋದಳು.

೨

ದೀಪಾವಳಿ ದಿನ ಬಂತು. ಅಯ್ಯೋ ! ಎಲ್ಲಾ ಎತ್ತಿಕೊಂಡು ಹೋದನೇ ! ಸಾವಿರ ರೂಪಾಯಿ ಬೆಳ್ಳಿ ಸಾಮಾನೂ ಹೋಯಿತೇ" ಎಂದು ಸೀತಮ್ಮ ಹಂಬಲಿಸಿದಳು.

"ಕೈಪೆಟ್ಟಿಗೆ ಕಾಣಲಿಲ್ಲವಲ್ಲಾ ! ಬ್ಯಾಂಕಿನಿಂದ ತೆಗೆದುಕೊಂಡು ಬಂದ ನೋಟುಗಳನ್ನೆಲ್ಲಾ ಅದರಲ್ಲಿಯೇ ಇಟ್ಟಿದ್ದೆನಲ್ಲಾ !" ಎಂದು ದೊರೆಸ್ವಾಮಿ ಅಯ್ಯಂಗಾರರು ಕೂಗಿದರು.

"ಪೋಲೀಸಿನವರಿಗೆ ಹೋಗಿ ಹೇಳಬೇಕು" ಎಂದು ಅಳಿಯದೇವರಾದ ಶೆಲ್ಲಮ್ ಅಯ್ಯಂಗಾರರು ಹೇಳಿದರು.

"ಎಷ್ಟು ಇಟ್ಟಿದ್ದಿರಿ ?" ಎಂದು ಸೀತಮ್ಮನ ತಮ್ಮನಾದ ಆರಾವಮುದ ಅಯ್ಯಂಗಾರರು ಕೇಳಿದರು.

"ಅಮ್ಮಾ, ಪಟಾಕಿ ಎಲ್ಲಾ ಎಲ್ಲಿ?" ಎಂದನು ಶೀನು.

"ಸುಮ್ಮನಿರು. ಪಟಾಕಿ ಎಲ್ಲವನ್ನೂ ಕಳ್ಳನು ತೆಗೆದುಕೊಂಡು ಹೋದನು" ಎಂದು ಶೀನುವಿನ ಕಿವಿಯಲ್ಲಿ ಕಿಟ್ಟು ಮೆತ್ತಗೆ ಹೇಳಿದನು.

"ಕಿಟ್ಟು, ಕಳ್ಳನೆಂದರೆ ಯಾರು ?" ಎಂದನು ಶೀನು.

"ಕಪ್ಪಗೆ ಇರುವನು. ಮನೆಯೊಳಕ್ಕೆ ಮೆತ್ತಗೆ ಬಂದು ರಾತ್ರಿ ನಾವು ನಿದ್ದೆ ಹೋಗುತ್ತಿರಬೇಕಾದರೆ ಸಾಮಾನುಗಳೆಲ್ಲವನ್ನೂ ತೆಗೆದುಕೊಂಡು ಹೋಗಿಬಿಡುವನು" ಎಂದನು ಕಿಟ್ಟು.

"ನಿನ್ನೆ ಬಂದಿದ್ದನೇ ?" ಎಂದನು ಶೀನು. ಕಿಟ್ಟು ತಲೆಯಾಡಿಸಿದನು.

"ಎಲ್ಲಾ ಪಟಾಕಿಯನ್ನೂ ತೆಗೆದುಕೊಂಡು ಹೋಗಿಬಿಟ್ಟನೇ?" ಎಂದು ಹೇಳಿ ಶೀನು ಅಳಲಾರಂಭಿಸಿದನು.

"ಅಳಬೇಡ ಮಗೂ ! ಆ ಕಳ್ಳನನ್ನು ಹಿಡಿದು ಒದೆಯೋಣ" ಎಂದು ಹೇಳಿ ತಾಯಿಯು ಮಗುವನ್ನು ಪ್ರೀತಿಯಿಂದ ಸವರಿದಳು.

"ಮಗುವಿನ ಪಟಾಕಿಯನ್ನು ಕೂಡ ತೆಗೆದುಕೊಂಡು ಹೋಗಿಬಿಟ್ಟಿರುವನು, ನೋಡಿದೆಯಾ, ಪಾಪಿ ಕಳ್ಳ" ಎಂದಳು ಕಮಲ.

ಕೈ ಪೆಟ್ಟಿಗೆಯನ್ನು ಮನೆಯೆಲ್ಲಾ ಹುಡುಕಿ ನೋಡಿ ಸಿಕ್ಕದೆ ಹೋದುದರಿಂದ ದೊರೆಸ್ವಾಮಿ ಅಯ್ಯಂಗಾರರು ತಲೆಯ ಮೇಲೆ ಕೈಯನ್ನಿಟ್ಟುಕೊಂಡು ಒಂದು ಮೂಲೆಯಲ್ಲಿ ಕುಳಿತುಕೊಂಡುಬಿಟ್ಟರು.

"ಹೋದುದು ಹೋದ ಹಾಗೆ. ಇನ್ನು ಸಿಕ್ಕುತ್ತದೆಯೇ ? ಬನ್ನಿ ಸ್ನಾನಕ್ಕೆ" ಎಂದು ಸೀತಮ್ಮ ಅಳಿಯನನ್ನು ಕರೆದಳು.

"ಇಲ್ಲ, ಚಾವಡಿಯೂರಿಗೆ ತಕ್ಷಣ ಹೋಗಿ ಪೋಲೀಸ್ ಸ್ಟೇಷನ್ನಿನಲ್ಲಿ ತಿಳಿಸಿ ಬರಬೇಕು. ಬನ್ನಿ, ಮಾವಾ" ಎಂದು ಶೆಲ್ಲಮು ಅಯ್ಯಂಗಾರರೂ ಮಾವಂದಿರಾದ ದೊರೆಸಾಮಿ ಅಯ್ಯಂಗಾರರೂ ಹೊರಕ್ಕೆ ಹೋದರು.

ಒಂದನ್ನೂ ಬಿಡದೆ ಎಲ್ಲಾ ಬೆಳ್ಳಿ ಸಾಮಾನುಗಳನ್ನೂ ತೆಗೆದುಕೊಂಡು ಹೋಗಿಬಿಟ್ಟಿದ್ದಾನಲ್ಲಾ ! ನಾನು ಅಳಿಯಂದಿರಿಗೆ ಹಬ್ಬವನ್ನು ಮಾಡು ವುದು ಹೇಗೆ" ಎಂದು ಸೀತಮ್ಮನು ಮತ್ತೆ ಹಂಬಲಿಸಿದಳು.

೪

ಬೀರನ ಮಗನು ಪಟಾಕಿ ಸುಡುತ್ತಿದ್ದನು. ಕೇರಿಯಲ್ಲಿ ಇತರ ಮಕ್ಕಳೆಲ್ಲರೂ ಸುತ್ತಿಕೊಂಡು ಕೈ ತಟ್ಟಿ ಕೂಗುತ್ತಿದ್ದರು.

ಪಟಾಕಿ ಯಾವುದು ? ಎಲ್ಲಿಂದ ಬಂದಿತು ? ಯಾರಿಗೂ ತಿಳಿಯದು. ದೀಪಾವಳಿಯ ದಿನ ಬೆಳಿಗ್ಗೆ ನಾಲ್ಕು ಪಟಾಕಿ ಕಟ್ಟುಗಳನ್ನು ಬೀರನು ತನ್ನ ಮಗನಿಗೆ ಕೊಟ್ಟು 'ಸುಡು' ಎಂದು ಹೇಳಿದನು. ಹುಡುಗನು ಒಂದೇ ಹಾರು ಹಾರಿ "ಅಮ್ಮಾ ! ಬೆಂಕಿ ಕೊಡು" ಎಂದು ಓಡಿದನು.

* * *

ದೀಪಾವಳಿ ಕಳೆದನಂತರ ಮುಂದಿನ ಶನಿವಾರ ಯಾರೋ ಇಬ್ಬರು ಬಂದು ಬೀರನನ್ನು ಕರೆದುಕೊಂಡು ಹೋದರು. ಹೋದವನು ಮತ್ತೆ ಹಿಂತಿರುಗಿ ಬರಲಿಲ್ಲ. ಹೆಂಡತಿಯೂ ಮಗನೂ ಹಂಬಲಿಸುತ್ತ ಊರೊಳಗಿದ್ದ ಉಪಾಧ್ಯಾಯರ ಮನೆಗೆ ಓಡಿದರು. "ಒಂದು ಅರ್ಜಿ ಹಾಕಿ ನೋಡುತ್ತೀರಾ ?" ಎಂದು ಅತ್ತಳು ಹೆಂಡತಿ.

"ಪೋಲೀಸಿನವರು ನಿನ್ನ ಗಂಡನ ಮೇಲೆ ಕನ್ನ ಹಾಕಿ ಕಳವು ಮಾಡಿದನೆಂದು ಕೇಸು ತಂದಿದ್ದಾರೆ" ಎಂದು ಉಪಾಧ್ಯಾಯರಾದ ಮಹಾಲಿಂಗಂ ಪಿಳ್ಳೆಯವರು ಹೇಳಿದರು.

"ಅಯ್ಯೋ ಕೆಟ್ಟೆನಲ್ಲಾ" ಎಂದು ಅವಳು ತಲೆತಲೆ ಬಡಿದುಕೊಂಡಳು.

ಹೆಂಡದ ಅಂಗಡಿಯಲ್ಲಿ ಸಿಕ್ಕಿದ ಸುದ್ದಿಯ ಮೇಲೆ ಪೋಲೀಸಿನವರು ಉಡುಪಿಳ್ಳೆ ಬಂದು ಕುಪ್ಪನನ್ನು ಕರೆದುಕೊಂಡು ಹೋಗಿ ಅನಂತರ

ತಿರುಗಿ ಬಂದು ಕೇರಿಯಲ್ಲಿ ವಿಚಾರಿಸಿದರು. ಕಸದ ಗುಂಡಿಯಲ್ಲಿ ಸಿಕ್ಕಿದ ಪಟಾಕಿ ಚೂರುಗಳನ್ನು ನೋಡಿ "ಯಾವುದು ಹೊಲಗೇರಿಯಲ್ಲಿ ಪಟಾಕಿ ?" ಎಂದು ವಿಚಾರಿಸಿದರು. ಬೀರನ ಮಗನು ಸುಟ್ಟನೆಂದು ಹುಡುಗರು ಕೆಲವರು ಹೇಳಿದರು. ಸುಟ್ಟಿದ್ದ ಪಟಾಕಿ ಚೂರುಗಳನ್ನು ಎಲ್ಲಾ ಬಾಚಿಕೊಂಡು ಹೋದರು.

ಅನಂತರ ಬೀರನನ್ನು ಚಾವಡಿಯೂರಿಗೆ ಕರೆದುಕೊಂಡುಹೋಗಿ ಸ್ಟೇಷನ್ನಿನಲ್ಲಿ ವಿಚಾರಿಸಿದರು. 'ವಿಚಾರಿಸುವುದೆಂದರೆ' ಗೊತ್ತಲ್ಲ !

"ಹೊಡೆಯಬೇಡಿ, ಸ್ವಾಮಿ ! ಹೇಳಿಬಿಡುತ್ತೇನೆ" ಎಂದನು ಬೀರನು.

* * * *

ಮರುದಿನ ತಲೆಯೂರಲ್ಲಿ ವೆಂಕಟ, ಚಿನ್ನರಾಯ ಎನ್ನುವ ಕೊರವರಿಬ್ಬರನ್ನೂ ಹಿಡಿದುಕೊಂಡು ಹೋದರು. ಮೂರನೆಯದಿನ ನೆರೆ ಊರಿನ ಕುಪ್ಪಾಚಾರಿ ಮನೆಯಲ್ಲಿ ಶೋಧನೆಯನ್ನುಮಾಡಿದರು. ಬೆಳ್ಳಿ ಸಾಮಾನುಗಳು ಕೆಲವು ಸಿಕ್ಕಿದವು. ಅನಂತರ ಕುಪ್ಪಾಚಾರಿಯನ್ನು ವಿಚಾರಿಸಿದರು. ಎರಡು ದಿನಗಳು ಕಳೆದಮೇಲೆ ಕುಪ್ಪಾಚಾರಿಯ ಮಾವನ ಮನೆಯನ್ನು ಶೋಧಿಸಿದ್ದರಲ್ಲಿ ನೋಟುಗಳಾಗಿ ಐದುನೂರು ರೂಪಾಯಿಗಳು ಬೆಳ್ಳಿ ಸಾಮಾನುಗಳು ಕೆಲವೂ ಸಿಕ್ಕಿದವು.

೫

ಬೀರನ ಮಗನು ಸಾಕ್ಷಿ ಹೇಳುವ ಗೂಡಿನಲ್ಲಿ ನಿಂತನು.

"ನಿಮ್ಮಪ್ಪ ನಿನಗೆ ಪಟಾಕಿ ಕೊಟ್ಟನೇ ? "

"ಹೌದು ಸಾಮಿ—ಇಲ್ಲ ಸಾಮಿ—" ಎಂದನು ಹುಡುಗನು.

"ಧೈರ್ಯವಾಗಿ ಹೇಳು ಭಯಪಡಬೇಡ" ಎಂದು ಇನ್ಸ್ಪೆಕ್ಟರು ಗದರಿಸಿ ಕೇಳಿದರು.

"ನಾನು ಅಪ್ಪನನ್ನು ಪಟಾಕಿ ಕೇಳಿದೆನು. ಕೆನ್ನೆಗೆ ಒಂದೇಟು ಕೊಟ್ಟನು. ನಾನು ಏಟು ತಡೆಯಲಾರದೆ ಕೆಳಗೆ ಬಿದ್ದೆನು. ನಾನು ಪಟಾಕಿ ಸುಡಲೇ ಇಲ್ಲ. ಸತ್ಯ" ಎಂದನು ಹುಡುಗನು.

"ಹಾಗೇ ಸಾಮಿ! ಎಲ್ಲಾರು ಸುಳ್ಳು ಹೇಳುತ್ತಿದ್ದಾರೆ" ಎಂದು ಕೋರ್ಟಿನ ಒಂದು ಮೂಲೆಯಲ್ಲಿ ಜನಸಂದಣಿಯ ಮಧ್ಯೆ ನಿಂತುಕೊಂಡು ಇದ್ದಕ್ಕೆ ಇದ್ದಹಾಗೆ ಹುಡುಗನ ತಾಯಿ ಕೂಗಿದಳು. "ಹಿಡಿ ಅವಳನ್ನು!" ಎಂದರು ಪೋಲೀಸ್ ಇನ್ಸ್ಪೆಕ್ಟರ್.

ತಕ್ಷಣವೇ ಪೋಲೀಸಿನವರಿಬ್ಬರು ಹಾರಿದರು. ಬೀರನ ಹೆಂಡತಿಯನ್ನು ಎಳೆದುಕೊಂಡು ಮ್ಯಾಜಿಸ್ಟ್ರೇಟರ ಮೇಜಿನ ಪಕ್ಕದಲ್ಲಿ ಕರೆದುಕೊಂಡು ಹೋಗಿ ನಿಲ್ಲಿಸಿದರು.

"ಎಚ್ಚರ! ಸಾಕ್ಷಿಗೆ ಹೇಳಿಕೊಡುವುದಕ್ಕಾಗಿಯೇ ಇಲ್ಲಿ ಬಂದಿರುವೆ" ಎಂದು ಮ್ಯಾಜಿಸ್ಟ್ರೇಟ್ ಗದರಿಸುವ ಹೊತ್ತಿಗೆ ಬೀರನ ಹೆಂಡತಿ ಮೂರ್ಛೆ ಹೋಗುವಂತೆ ನಡುಗಿದಳು.

"ಕರೆದುಕೊಂಡು ಹೋಗು ಹೊರಕ್ಕೆ" ಎಂದು ಮ್ಯಾಜಿಸ್ಟ್ರೇಟರೂ ಇನ್ಸ್ಪೆಕ್ಟರೂ ಒಂದೇ ಉಸಿರಿನಿಂದ ಹೇಳಿದರು.

ಅನಂತರ ವಿಚಾರಣೆ ನಡೆಯಿತು. ಪಟಾಕಿಗಳನ್ನು ಕುರಿತು ಹುಡುಗನು ಎರಡು ಮೂರು ರೀತಿ ಬದಲಾಯಿಸಿಕೊಳ್ಳುತ್ತ ಹೇಳಿದನು.

"ಸಾಕು!" ಎಂದರು ಮ್ಯಾಜಿಸ್ಟ್ರೇಟರು.

ಅನಂತರ ಇನ್ಸ್ಪೆಕ್ಟರು ಬಹಳ ಹೊತ್ತು ಮಾತಾಡಿದರು.

* * * *

ಒಂದು ವಾರ ಕಳೆದಮೇಲೆ ಮ್ಯಾಜಿಸ್ಟ್ರೇಟರು ಬೀರನನ್ನೂ ತಲೆಯೂರಿನ ಬೇಡರನ್ನೂ ಬಿಡುಗಡೆ ಮಾಡಿಬಿಟ್ಟರು. ಆಚಾರಿ (ಅಕ್ಕಸಾಲಿಗರು) ಇಬ್ಬರಿಗೆ ಮಾತ್ರ ಶಿಕ್ಷೆ. "ಬೀರನು ಪೋಲೀಸಿನವರೊಂದಿಗೆ ಹೇಳಿದುದನ್ನು ಮಾತ್ರ ಆಧಾರವಾಗಿಟ್ಟುಕೊಂಡು ಕೊರವರನ್ನು ಶಿಕ್ಷಿಸಲಾಗದು" ಎಂದು ತೀರ್ಪನ್ನು ಹೇಳಿಬಿಟ್ಟರು.

ಬೀರನ ಮೇಲೂ ಸಾಕಾದಷ್ಟು ಸಾಕ್ಷ್ಯವಿಲ್ಲ. ಕೇರಿಯಲ್ಲಿ ಹೇಗೆ ಪಟಾಕಿ ಬಂದಿತೆನ್ನುವುದು ಬಹಳ ಸಂಶಯಕ್ಕೆ ಎಡೆ ಕೊಟ್ಟರೂ ದೊರೆಸಾಮಿ ಅಯ್ಯಂಗಾರರ ಮನೆಯಲ್ಲಿ ಕಳವಾದ ಪಟಾಕಿಗಳೇ ಕೇರಿಯಲ್ಲಿ

ಕಸದ ಗುಂಡಿಯಲ್ಲಿ ಸಿಕ್ಕಿದ ಚೂರುಗಳಿಂದು ನಿಶ್ಚಯವಾಗಿ ಯಾರೂ ಸಾಕ್ಷಿ ಹೇಳಲಿಲ್ಲವೆಂಬ ಕಾರಣವನ್ನಿಟ್ಟುಕೊಂಡು ಬೀರನನ್ನೂ ಬಿಡುಗಡೆ ಮಾಡಿಬಿಟ್ಟರು.

೬

"ಏನೋ ವೆಂಕಟಾ, ಆ ಮುಂಕನ ಹೊರತು ಬೇರೆ ಯಾರಾದರೂ ಪಟಾಕಿ ಕಟ್ಟನ್ನು ಎತ್ತಿಕೊಂಡು ಹೋಗುವನೇ? ಅವರಿಂದಲೇ ಅಲ್ಲವೇ ಇಷ್ಟು ಫಜೀತಿ ಆಯಿತು?" ಎಂದ ಚೆನ್ನ.

"ಆಗಲೇ ನಾನು ಹೇಳಿದೆ. ಬೇರೆ ಯಾವುದಾದರೂ ಸಾಮಾನನ್ನು ತೆಗೆದುಕೊಳ್ಳೋ ಎಂದು. ನಾನು ಎಷ್ಟು ಹೇಳಿದರೂ ಆ ಪಟಾಕಿ ಕಟ್ಟು ಗಳೆಲ್ಲವನ್ನೂ ಬಾಚಿ ಗಂಟು ಕಟ್ಟಿಕೊಳ್ಳುತ್ತಿದ್ದ. ಅಷ್ಟರಲ್ಲಿ ಮನೆಯೊಳಗೆ ಯಾರೋ "ಊಂ" ಎಂದು ಶಬ್ದ ಮಾಡಿದರು. ನಾವು ಹೊರಡಬೇಕಾ ಯಿತು" ಎಂದನು ವೆಂಕಟ.

"ಜಾತಿಗೆ ಒಗ್ಗದ ಕಸಬಿಗೆ ಯಾರೂ ಹೋಗಕೂಡದು. ನಾವು ಇವ ನನ್ನು ಸೇರಿಸಿಕೊಂಡು ಹೋದುದು ನಮ್ಮ ತಪ್ಪು" ಎಂದನು ಚೆನ್ನ.

ಮೊದಲನೆಯ ದಿನ ಹುಡುಗನು ಪಟಾಕಿಗಾಗಿ ಅತ್ತುದೂ ಬೀರನು ಕುಡಿತದ ಸೊಕ್ಕಿನಲ್ಲಿ ಹುಡುಗನನ್ನು ಹೊಡೆದುದೂ ಆ ಕೊರವರಿಗೆ ತಿಳಿಯದು.

ಬೀರನು ಕೇರಿಗೆ ತಿರುಗಿ ಬಂದನು. ಜೈಲಿನಲ್ಲಿ ವೇಳೆವೇಳೆಗೆ ಆಹಾರ ಕೊಡುತ್ತಿದ್ದರು. ಮನೆಯಲ್ಲಿಯಾದರೊ ಹಿಟ್ಟಿಗೆ ಗತಿಯಿಲ್ಲ. ಬೀರನ ಹೆಂಡತಿ ಮಡಿಕೆಯನ್ನು ಎತ್ತಿಕೊಂಡು ಒಕ್ಕಲಿಗರ ಬೀದಿಗೆ ಹೋದಳು. ಆದರೂ ಗಂಡನು ಮನೆಗೆ ತಿರುಗಿ ಬಂದನೆಂಬ ಸಂತೋಷವನ್ನು ಹಸಿವಿನ ತಾಪವೂ ಮರೆಮಾಡಲಾಗಲಿಲ್ಲ.

ಮತ್ತೆ ಬೀರಯ್ಯನ ಮಗನು ಪಟಾಕಿಗಾಗಿ ಅಳಲಾರನು. ಯಾರಾ ದರೂ ಪಟಾಕಿ ಸುಡುವುದನ್ನು ಕಂಡರೆ ಅವನು ದೂರ ಹೋಗಿಬಿಡುವನು.

———

# ೯. ಒಂದು ಎಲೆಕ್ಷನ್ ಕಥೆ

ಕೋಟ್ಟೂರ್ ಜಿಲ್ಲೆಯ ಮುಖ್ಯ ನಗರವಾದ ಕೋಟ್ಟೂರಿನಲ್ಲಿ ಪೂರ್ವದಲ್ಲಿ ಕಾಟ್ಟಾಂಚೇರಿ ಎಂದು ಪ್ರಸಿದ್ಧವಾಗಿದ್ದು ಈಗ ಕೆಲವು ವರ್ಷಗಳಾಗಿ ಜೇಮ್ಸ್‌ಪೇಟೆಯೆಂದು ಹೊಸ ಹೆಸರನ್ನು ಪಡೆದ ಆದಿದ್ರಾವಿಡ ಬೀದಿಯಲ್ಲಿ ಸಪ್ಲೈಯರ್ ಶ್ರೀರಂಗನೆನ್ನುವನು ಅಲ್ಲಿ ವಾಸವಾಗಿದ್ದ ಮೂವತ್ತು ಹರಿಜನ ಕುಟುಂಬಗಳಲ್ಲಿ ಸ್ವಲ್ಪ ಒಳ್ಳೆಯ ಸ್ಥಿತಿಯಲ್ಲಿದ್ದನು. ಅನೇಕವಾಗಿ ಜೇಮ್ಸ್‌ಪೇಟೆಯಲ್ಲಿ ವಾಸವಾಗಿದ್ದವರೆಲ್ಲರೂ ಸೋನೆ ಬೆಟ್ಟದಲ್ಲಿ ಕೂಲಿ ಕೆಲಸ ಮಾಡಿ ಜೀವನವನ್ನು ನಡೆಸುತ್ತಿದ್ದರು. ಶ್ರೀರಂಗನು ಕೂಲಿ ಕೆಲಸ ಮಾಡಲಿಲ್ಲ. ಬೆಟ್ಟದ ಮೇಲೆ ಕಾಫೀ, ಟೀ ಸೊಪ್ಪು ತೋಟಗಳನ್ನು ಇಟ್ಟುಕೊಂಡಿದ್ದ ಪರಂಗಿಯವರ ಮನೆಗೆ ಬೇಕಾದ ಸಾಮಾನುಗಳನ್ನು ಕೋಟ್ಟೂರಲ್ಲಿಯೂ ಸಂತೆಗಳಲ್ಲಿಯೂ ಕೊಂಡು ಅವರಿಗೆ ತೆಗೆದುಕೊಂಡು ಹೋಗಿ ಕೊಟ್ಟು ಆದರಲ್ಲಿ ಸ್ವಲ್ಪ ಲಾಭವನ್ನು ಸಂಪಾದಿಸಿ ಗೌರವವಾಗಿ ಜೀವನವನ್ನು ನಡೆಸುತ್ತ ಬಂದನು. ಬೆಟ್ಟದಲ್ಲಿ ಎಲ್ಲಾ ದೊರೆಗಳೂ ದೊರೆಸಾನಿಯರೂ ಅವನಲ್ಲಿ ಬಹಳ ವಿಶ್ವಾಸವನ್ನೂ ನಂಬಿಕೆಯನ್ನೂ ಇಟ್ಟಿದ್ದರು.

ಕೋಟ್ಟೂರು ಜಿಲ್ಲಾ ಕಲೆಕ್ಟರಿಗೂ ಸಹ ಸಪ್ಲೈಯರ್ ಶ್ರೀರಂಗನ ಯೋಗ್ಯತೆಯನ್ನೂ ಒಳ್ಳೆಯ ಗುಣಗಳನ್ನೂ ಕುರಿತು ಸಮಾಚಾರ ಮುಟ್ಟಿತ್ತು. ಮುನಿಸಿಪಾಲಿಟಿಯಲ್ಲಿ ಹರಿಜನ ಸದಸ್ಯನೊಬ್ಬನನ್ನು ನೇಮಿಸಬೇಕಾಗಿದ್ದಾಗ ಕೋಟ್ಟೂರು ಪೋಲೀಸ್ ಸೂಪರಿಂಟೆಂಡೆಂಟರೂ ಜಿಲ್ಲಾ ಡಾಕ್ಟರೂ ಲಂಡನ್‌ಮಿಷನ್ ಪಾದ್ರಿಯವರೂ ಎಲ್ಲರೂ ಸೇರಿ ಪರಂಗಿಯವರ ಕ್ಲಬ್ ಬಟ್ಲರ್ ಸ್ವಾಮಿಪ್ರಿಯನ್ ಎನ್ನುವವರನ್ನು ನೇಮಿಸಬೇಕೆಂದು ಜಿಲ್ಲಾ ಕಲೆಕ್ಟರನ್ನು ಒತ್ತಾಯ ಮಾಡಿದರು. ಈ ಯೋಚನೆಯನ್ನು ಕಲೆಕ್ಟರರ ಹೆಂಡತಿ ತಡೆದುಬಿಟ್ಟಳು. ಸಪ್ಲೈಯರ್ ಶ್ರೀರಂಗನಿಗೇ ಆ ಸ್ಥಾನವನ್ನು ಕೊಡಬೇಕೆಂದು ಬೆಟ್ಟದಲ್ಲಿದ್ದ ಬಿಳಿ ದೊರೆಸಾನಿಯರು ಸಿಪಾರ್ಸು

ಮಾಡಿರುವರು, ಅದೇ ಸರಿಯೆಂದು ಕಲೆಕ್ಟರರ ಹೆಂಡತಿಯು ಒತ್ತಾಯದಿಂದ ತನ್ನ ಗಂಡನ ಹತ್ತಿರ ಹೇಳಿದುದೇ ನೆರವೇರಿತು. "ನಿಮಗೆ ತಿಳಿಯದು. ಕ್ಲಬ್ ಬಟ್ಲರನ್ನು ನೇಮಿಸಿದರೆ ಊರಲ್ಲಿರುವ ದೇಶೀಯ ಪಟಿಂಗರು ದೊಡ್ಡ ಚಳವಳಿಯನ್ನೇ ಎಬ್ಬಿಸಿಬಿಡುವರು. ಕಾಲದ ಸ್ಥಿತಿಯನ್ನನುಸರಿಸಿಕೊಂಡು ಹೋಗಬೇಕು" ಎಂದು ಕಲೆಕ್ಟರು ಇತರ ಉದ್ಯೋಗಸ್ಥರಿಗೆ ಸಮಾಧಾನ ಹೇಳಿ ಶ್ರೀರಂಗನನ್ನೇ ಶಿಫಾರ್ಸು ಮಾಡಿ ನೇಮಿಸಿದರು.

ಅದು ಮೊದಲು ಶ್ರೀರಂಗನ ಸ್ಥಿತಿ ಕೆಡಲು ಆರಂಭವಾಯಿತು; ದೊಡ್ಡ ಮನುಷ್ಯನಾಗಿಬಿಟ್ಟನು. ಕಲೆಕ್ಟರೂ ಉದ್ಯೋಗಸ್ಥರೂ ಅವನೊಡನೆ ಕೈ ಕುಲುಕಿ ಮಾತಾಡಿಬಿಟ್ಟರಲ್ಲವೇ? ತನ್ನ ವ್ಯಾಪಾರವನ್ನು ಸರಿಯಾಗಿ ಗಮನಿಸಲಿಲ್ಲ. ಸಾಮಾನುಗಳನ್ನು ತಾನೇ ಹೋಗಿ ಕೊಳ್ಳುವುದಕ್ಕೆ ಬದಲಾಗಿ ತನ್ನ ಚಿಕ್ಕಪ್ಪನ ಮಗನಾದ ವರದನನ್ನು ಕಳುಹಿಸುವನು. ಬೆಟ್ಟಕ್ಕೂ ಒಂದೊಂದು ದಿನವೇ ಹೋಗುವನು, ಒಂದೊಂದು ದಿನ ವರದನನ್ನು ಕಳುಹಿಸುವನು. ಬಂದ ಲಾಭದಲ್ಲಿ ಅವನಿಗೆ ಒಂದು ಪಾಲು ಕೊಡುವನು. ತನ್ನ ಕಾರ್ಯಗಳಲ್ಲಿ ಗಮನ ಕಡಿಮೆಯಾಯಿತು. ಲಾಭವೂ ಕಡಿಮೆಯಾಯಿತು. ಕುಟುಂಬದ ಖರ್ಚಿಗೆ ಬೇಕಾದಷ್ಟು ವರಮಾನವಿಲ್ಲದೆ ದೊರೆಸಾನಿಯವರು ಮುಂಗಡ ಕೊಡುವ ಹಣದಲ್ಲಿ ಸ್ವಲ್ಪ ಭಾಗವನ್ನು ಮನೆಯ ಖರ್ಚಿಗೆ ಉಪಯೋಗಿಸಿಕೊಳ್ಳುವನು. ಅನಂತರ ಕಷ್ಟದಲ್ಲಿ ಬೀಳುವನು. ಅಂಗಡಿಗಳಲ್ಲಿ ಸಾಲವಾಗಿ ಸಾಮಾನುಗಳನ್ನು ಕೊಳ್ಳಲಾರಂಭಿಸಿದನು. ಅನೇಕ ದಿನಗಳಿಂದ ವ್ಯಾಪಾರವನ್ನು ಯೋಗ್ಯವಾದ ರೀತಿಯಲ್ಲಿ ಮಾಡುತ್ತಿದ್ದವನಾದುದರಿಂದಲೂ ಮುನಿಸಿಪಲ್ ಸದಸ್ಯನೆಂಬ ಪದವಿಯಿಂದ ಬಂದಿದ್ದ ಹೊಸ ಗೌರವದಿಂದಲೂ ಅಂಗಡಿಯವರು ಸಾಮಾನುಗಳನ್ನು ಸಾಲವಾಗಿ ಕೊಟ್ಟರು. ದೊರೆಸಾನಿಯವರಿಗೆ ಲೆಕ್ಕವನ್ನು ಒಪ್ಪಿಸುವುದರಲ್ಲಿ ಕೆಲವು ಸುಳ್ಳುಗಳನ್ನೂ ಹೇಳಬೇಕಾಯಿತು.

ಕ್ರಮ ಕೆಟ್ಟುಹೋದರೆ ಸಣ್ಣ ವ್ಯಾಪಾರವಾದರೂ ಸರಿ, ದೊಡ್ಡ ವ್ಯಾಪಾರವಾದರೂ ಸರಿ, ಸಿಕ್ಕುಗಳು ಬರಬರುತ್ತ ಬಹು ಬೇಗ ಹೆಚ್ಚಿ ಕೊನೆಯಲ್ಲಿ ಮನುಷ್ಯನನ್ನು ಹಳ್ಳಕ್ಕೆ ತಳ್ಳಿಬಿಡುವುದು ತಿಳಿದ ವಿಷಯ. ಊರಿನಲ್ಲಿ ಶ್ರೀರಂಗನಿಗೆ ಅಂದಿದ್ದ ಗೌರವ ಕಡಿಮೆಯಾಯಿತು. ಪೂರ್ವದಲ್ಲಿ ಇತರ ನಗರಪರಿಪಾಲನ ಸದಸ್ಯರಿಗಿಂತಲೂ ಶ್ರೀರಂಗನೇ ಯೋಗ್ಯನೆಂದು

ಅರ್ಧ ಹಾಸ್ಯವಾಗಿಯೂ ಅರ್ಧ ನಿಜವಾಗಿಯೂ ಊರಲ್ಲಿ ಹೇಳುತ್ತಿದ್ದ ಮಾತು ಈಗ ಬದಲಾಯಿತು.

೨

ಮುನಿಸಿಪಲ್ ಅಧ್ಯಕ್ಷರಾದ ಗೋಪಾಲ ಚೆಟ್ಟಿಯಾರ‍್ರವರು ಆಕಸ್ಮಾತ್ತಾಗಿ ದೈವಾಧೀನರಾದುದರಿಂದ ಮತ್ತೊಬ್ಬರನ್ನು ಚುನಾಯಿಸಲು ಏರ್ಪಾಡುಗಳಾದುವು. ಆ ಸ್ಥಾನಕ್ಕೆ ದೊಡ್ಡ ನೂಲು ವ್ಯಾಪಾರಿ ಧನಪಾಲ ಶೆಟ್ಟಿಯವರು ಒಬ್ಬ ಉಮೇದುವಾರರಾಗಿ ನಿಂತರು. ಅವರಿಗೆ ಪೈಪೋಟಿಯಾಗಿ ವಕೀಲ್ ರಾಮಸ್ವಾಮಿ ಮೊದಲಿಯಾರ‍್ರು ನಿಂತರು. ಊರಲ್ಲಿ ವಕೀಲರೊಳಗೂ ಅಂಗಡಿ ಬೀದಿಯಲ್ಲಿಯೂ ಒಂದು ತಿಂಗಳ ವರೆಗೆ ಇದೇ ಮಾತು.

ಮಾತಿನ ಬೇಟೆ ಆರಂಭವಾಯಿತು. ಚುನಾವಣೆಗೆ ನಾಲ್ಕು ದಿನಗಳಿರಬೇಕಾದರೆ ಹಣದ ಮಾತೂ ಆರಂಭವಾಯಿತು. ಸದಸ್ಯರೊಬ್ಬರಿಗೆ ರೂ. ೧,೦೦೦, ೨,೦೦೦ ಎತ್ತಿ ಇಟ್ಟಿದ್ದಾರೆ ಶೆಟ್ಟಿಯವರು" ಎಂದರು. ಇದರಲ್ಲಿ ಅರ್ಧ ನಿಜ, ಅರ್ಧ ಸುಳ್ಳು ಆದರೂ ರಾಮಸ್ವಾಮಿ ಮೊದಲಿಯಾರರು ಈ ವ್ಯವಹಾರಕ್ಕೆ ತಾವು ಇಳಿಯುವ ಉದ್ದೇಶವಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟರು. ಅವರ ಸ್ನೇಹಿತರಿಗೆ ಉತ್ಸಾಹ ಕಡಿಮೆಯಾಯಿತು. ಅವರು ಎಷ್ಟೇ ಹೇಳಿದರೂ, "ಹಣವನ್ನು ಖರ್ಚುಮಾಡಿಯಾದರೂ ಈ ಪದವಿಯನ್ನು ಸಂಪಾದಿಸಬೇಕೆಂದು ನನಗೆ ಇಷ್ಟವಿಲ್ಲ" ಎಂದು ಮೊದಲಿಯಾರರು ಹಟ ಹಿಡಿದರು.

ಸೋಮವಾರ ಬೆಳಿಗ್ಗೆ ೮ ಘಂಟೆಗೆ ಚುನಾವಣೆ. ಭಾನುವಾರ ರಾತ್ರಿ ೮ ಘಂಟೆಗೆ ರಾಮಸ್ವಾಮಿ ಮೊದಲಿಯಾರರ ಮನೆಯಲ್ಲಿ ಸ್ನೇಹಿತರು ಸೇರಿದರು.

ನಶ್ಯದ ಅಂಗಡಿ ರಂಗ ಪಿಳ್ಳೆಯವರು " ಹೀಗೆ ಮಾಡಿದರೆ ತಮಗೇನೂ ಒಂದೂ ಇಲ್ಲ. ನಮಗೆ ಅಪಮಾನ " ಎಂದರು.

ಮಳಿಗೆ ಸೀತಾರಾಮಯ್ಯರವರು " ಇನ್ನು ಊರಲ್ಲಿ ನಾವಿರಲಾಗದು. ಎಲ್ಲಿಯಾದರೂ ಹೋಗಿಯೇ ಬಿಡಬೇಕು " ಎಂದರು.

"ನಮ್ಮೆಲ್ಲರನ್ನೂ ಹೀಗೆ ಅಪಮಾನಕ್ಕೆ ಗುರಿ ಮಾಡುವುದು ನಿಮಗೆ ನ್ಯಾಯವೇ?" ಎಂದು ವೀರರಾಘವ ಶೆಟ್ಟಿಯವರು ಕೇಳಿದರು. ಇವರು ಉಮೇದುವಾರರಾದ ಧನಪಾಲ್ ಶೆಟ್ಟಿಯವರ ಮೈದುನಂದರು. ಹಿಂದೆ ಅವರೊಂದಿಗೆ ವ್ಯಾಪಾರದಲ್ಲಿ ಸೇರಿದ್ದು ಅನಂತರ ಬೇರೆಯಾದರು. ಅದು ಮೊದಲು ಇಬ್ಬರಿಗೂ ಬಹಳ ವಿರೋಧ.

ಮೊದಲಿಯಾರರು ಏನೂ ಮಾತಾಡಲಿಲ್ಲ. ಮತ್ತೆ ಸೀತಾರಾಮಯ್ಯರವರು "ಹೀಗೆ ಹಣವನ್ನು ಕೊಟ್ಟು ಊರನ್ನು ಕೆಡಿಸಿ ಮುನಿಸಿಪಾಲಿಟಿಯನ್ನು ನಾಶ ಮಾಡುವುದನ್ನು ನಾವು ನೋಡಿಕೊಂಡಿರುವುದೇ?" ಎಂದರು.

ಮೊದಲಿಯಾರರು "ಅದಕ್ಕೆ ನಾವು ಏನು ಮಾಡಲಾದೀತು! ಕಾಲವು ಕೆಟ್ಟು ಹೋಯಿತು. ಹಿಂದೆ ಇದ್ದ ಅಧ್ಯಕ್ಷರೆಲ್ಲರೂ ಎಷ್ಟೋ ಗೌರವವಾಗಿದ್ದರು. ಯೋಗ್ಯರಿಗೆ ಇನ್ನು ಮುಂದೆ ಅವಕಾಶವಿಲ್ಲ" ಎಂದರು.

ಆಯುರ್ವೇದ ಪಂಡಿತರಾದ ರಾಘವಾಚಾರ್ಯರು "ವಿಷಕ್ಕೆ ವಿಷವೇ ಮದ್ದು, ಮೊದಲಿಯಾರರೇ! ನೀವು ಈ ಕಾರ್ಯದಲ್ಲಿ ಹೀಗೆ ಉದಾಸೀನರಾಗಿರಲಾಗದು. ಸ್ವಲ್ಪ ಶ್ರದ್ಧೆ ವಹಿಸಬೇಕು" ಎಂದರು.

ಎರಡು ನಿಮಿಷ ಕಳೆದಮೇಲೆ ಗಡಿಯಾರದಲ್ಲಿ ೯ ಘಂಟೆ ಹೊಡೆಯಿತು. "ಒಳ್ಳೆಯ ಶಕುನವಾಯಿತು. ಇನ್ನೇನು ತಾಮಸ?" ಎಂದು ಹೇಳುತ್ತ ಸೀತಾರಾಮಯ್ಯರವರು ಎದ್ದರು. ಎದ್ದು ಮೊದಲಿಯಾರರ ಕೈಯನ್ನು ಹಿಡಿದು, ಕೂತಿದ್ದವರನ್ನೆಬ್ಬಿಸಿ ಒಂದು ಕೈಯನ್ನು ಅವರ ಹೆಗಲ ಮೇಲೆ ಹಾಕಿ ಬಹಳ ವಿಶ್ವಾಸದಿಂದ ಆಫೀಸು ಕೋಣೆಯೊಳಕ್ಕೆ ಅವರನ್ನು ಮಾತ್ರ ಕರೆದುಕೊಂಡು ಹೋದರು.

ಒಂದು ಗಳಿಗೆಯಾಯಿತು. ಅನಂತರ ಸೀತಾರಾಮಯ್ಯರವರು ನಗುಮುಖದಿಂದ ಬಂದು ಸೇರಿದ್ದವರನ್ನು ನೋಡಿ "ಸರಿ, ಕೆಲಸ ಮುಗಿಯಿತು. ಇನ್ನು ಮಾಡಬೇಕಾಗಿರುವುದನ್ನು ಮಾಡೋಣ. ಒಂದು ರಾತ್ರಿ ಮಾತ್ರ ಉಳಿದಿರುವುದು" ಎಂದರು. ಎಲ್ಲರಿಗೂ ಒಂದೇ ಆನಂದ. ಎಲ್ಲರೂ ತಮ್ಮ ಸಂತೋಷವನ್ನು ವ್ಯಕ್ತಗೊಳಿಸುತ್ತ ಕೂಗಾಡಿದರು.

೩

ಆ ರಾತ್ರಿ ಓಡಾಡಿದ ಮೋಟಾರ್ ಗಾಡಿಗಳಿಗೆ ಲೆಕ್ಕವೇ ಇಲ್ಲ. ರಾತ್ರಿ ಎರಡು ಘಂಟೆಗೆ ಮೊದಲಿಯಾರರ ಮನೆಗೆ ಸುದ್ದಿ ಮುಟ್ಟಿತು ಓಟು ಮಾಡ ಬೇಕಾಗಿದ್ದ ೩೫ ಸದಸ್ಯರಲ್ಲಿ ೧೭ ಸದಸ್ಯರು ಮೊದಲಿಯಾರರ ಪಕ್ಷವೆಂದು ನಿಶ್ಚಯವಾಗಿ ಹೇಳಿಬಿಟ್ಟರು. ಅದರಲ್ಲಿ ೧೦ ಜನರು ಶೆಟ್ಟಿಯವರಿಂದ ಪಡೆದ ಹಣವನ್ನೂ ತಿರುಗಿ ಕೊಟ್ಟುಬಿಟ್ಟರು. ಏಳು ಜನರು "ಯಾರ ಕಡೆ ಯಿಂದಲೂ ಹಣವನ್ನು ತೆಗೆದುಕೊಳ್ಳಲಾರೆವು. ಮೊದಲಿಯಾರ್ರಿಗೇನೇ ಓಟು ಮಾಡುವೆವು. ನಿಮಗೇತಕ್ಕೆ ಸಂದೇಹ ? " ಎಂದರು. ಇನ್ನು ಒಂದು ಓಟು ಬಂದರೆ ಸಾಕು. ಉಳಿದ ೧೮ ಜನರಲ್ಲಿ ಒಬ್ಬರು ನಾಗಪಟ್ಟಣಕ್ಕೆ ಕೋರ್ಟು ಕೆಲಸವಾಗಿ ಹೋಗಿದ್ದರು. 'ಅವರು ನಾಳೆಯೊಳಗೆ ಬರಲಾರರು. ೧೬ ಜನರು ಧನಪಾಲ ಶೆಟ್ಟಿಯವರ ಕಕ್ಷಿ. ಅವರನ್ನು ಅಲ್ಲಾಡಿಸಲು ಸಾಧ್ಯವಿಲ್ಲ. ಶ್ರೀರಂಗನದೊಬ್ಬನದೇ ಸಂದೇಹವಾಗಿರುವ ಓಟು. ಅವನು ಎಲ್ಲಿ ಹುಡುಕಿದರೂ ಸಿಕ್ಕಲಿಲ್ಲ. ಮನೆಯಲ್ಲಿ ವಿಚಾರಿಸಿದರೆ ಬೆಟ್ಟಕ್ಕೆ ಹೋಗಿಬಿಟ್ಟಿರುವನೆಂದು ಹೇಳುತ್ತಾರೆ.

ನಶ್ಯದ ಅಂಗಡಿ ರಂಗಪಿಳ್ಳೆಯವರು, "ಅವನ ತಮ್ಮ, ಅಧ್ಯಾಪಕ ನಾದ ಮುನಿಸಾಮಿಯನ್ನು ಕೇಳಿದಿರಾ ? " ಎಂದರು.

"ಕೇಳಿದೆವು. ಅವನು ಹೀಗೂ ಹಾಗೂ ಹೇಳುತ್ತಾನೆ. ಒಂದು ವೇಳೆ ಬೆಟ್ಟಕ್ಕೆ ಹೋಗಿರಬಹುದು, ಅಥವಾ ಮನೆಯಲ್ಲಿಯೇ ಬಚ್ಚಿಟ್ಟು ಕೊಂಡಿರಬಹುದು. ಬಡವರಿಗೆ ಈ ಕಷ್ಟ ಏತಕ್ಕೆ ? ಎಲ್ಲಿಯೂ ದಾಕ್ಷಿಣ್ಯ. ಹೇಗೆ ಹೋದರೂ ವಿರೋಧವೆಂದೆನ್ನುತ್ತಾನೆ "

"ಇಷ್ಟು ಮಾಡಿಯೂ ವ್ಯರ್ಥವಾಗಿ ಹೋಗುವಂತೆ ಇದೆಯೇ ? " ಎಂದರು ಸೀತಾರಾಮಯ್ಯರವರು.

"ಹೌದು ; ಹೀಗೆ ಮೂಗಿನಿಂದ ಅತ್ತರೆ ಕಾರ್ಯವಾಗುವುದೇ ? " ಎಂದು ನಶ್ಯದ ಅಂಗಡಿ ರಂಗಪಿಳ್ಳೆಯವರು ಬಹಳ ಕೋಪದಿಂದ ಹೇಳಿ ಎದ್ದರು.

"ನೀವು ನೋಡಿ ಏನಾದರೂ ಮಾಡಬಾರದೆ ?" ಎಂದು ಹೇಳಿದರು ಸೀತಾರಾಮಯ್ಯರವರು.

ರಂಗಪಿಳ್ಳೆಯವರು "ನಮ್ಮನ್ನೆಲ್ಲ ಯಾರು ನಂಬುತ್ತಾರೆ? ನಾವು ಬಡವರಾಗಿರುವೆವಲ್ಲ" ಎಂದರು.

"ಮೊದಲಿಯಾರರೇ! ರಂಗಪಿಳ್ಳೆಯವರೇ ಎಲ್ಲವನ್ನು ಮಾಡಲಿ. ನಾನಿನ್ನು ಈ ವಿಷಯವನ್ನು ಬಿಟ್ಟೆನು" ಎಂದರು ಸೀತಾರಾಮಯ್ಯರ್ರವರು.

"ಚೆನ್ನಾಯಿತು, ಒಳ್ಳೆ ಸಮಯವನ್ನು ಹುಡುಕಿದಿರಿ ವ್ಯಾಜ್ಯಕ್ಕೆ" ಎಂದು ವೀರರಾಘವ ಶೆಟ್ಟಿಯವರು ಎದ್ದಿದ್ದ ಸೀತಾರಾಮಯ್ಯರ್ರನ್ನು ಮತ್ತೆ ಕೂರಿಸಿದರು. ಕೂರಿಸಿಬಿಟ್ಟು ಮೊದಲಿಯಾರರ ಬಳಿ ಬಂದು "ಇದರಲ್ಲಿ ಇಳಿಯ ಬಾರದಾಗಿತ್ತು. ಇಳಿದ ಮೇಲೆ ಎಲ್ಲವನ್ನೂ ಸರಿಯಾಗಿ ಮಾಡಿ ಪೂರೈಸಬೇಕು. ಕೈಗೆ ಬಂದದ್ದು ಬಾಯಿಗೆ ಬರದಂತೆ ಬಿಟ್ಟು ಬಿಡುವುದೇ? ದಯೆಮಾಡಿ ರಂಗಪಿಳ್ಳೆಗೆ ಈ ಶ್ರೀರಂಗನ ವಿಷಯವನ್ನು ಒಪ್ಪಿಸಿಬಿಡಿ. ಭಗವಂತನಿದ್ದಾನೆ. ನಮ್ಮ ಕಕ್ಷಿ ಜಯಿಸುವುದು" ಎಂದರು.

ಮೊದಲಿಯಾರರಿಗೂ ಉತ್ಸಾಹವುಂಟಾಯಿತು. ಮನೆಯೊಳಕ್ಕೆ ಪ್ರವೇಶಿಸಿದರು. ಪೆಟ್ಟಿಗೆಯನ್ನು ತೆಗೆದು ಮುಚ್ಚಿದ ಶಬ್ದವು ಕೇಳಿಸಿತು. ಒಂದು ಚೀಲದ ಸಹಿತ ಹೊರಕ್ಕೆ ಬಂದು ರಂಗಪಿಳ್ಳೆಯನ್ನು ಕರೆದುಕೊಂಡು ಬೇರೊಂದು ಕೋಣೆಗೆ ಹೋದರು.

೪

ನಶ್ಯದ ಅಂಗಡಿ ರಂಗಪಿಳ್ಳೆಯವರು ಜೇಮ್ಸ್‌ಪೇಟೆಗೆ ಹೋದರು. ಶ್ರೀರಂಗನ ತಮ್ಮನಾದ ಮುನಿಸಾಮಿಯನ್ನು ನೋಡಿ ನೂರು ರೂಪಾಯಿಯನ್ನು ಒಂದು ಕಾಗದದಲ್ಲಿ ಐದು ಪೊಟ್ಟಣಗಳಾಗಿ ಕಟ್ಟಿ ಅವನೊಂದಿಗೆ ಮಾತಾಡದೆ ಕೊಟ್ಟರು. ಮುನಿಸಾಮಿ ಇಷ್ಟು ಮೊತ್ತವನ್ನು ಬೆಳ್ಳಿಯಾಗಿ ಒಂದೇ ಸಮಯದಲ್ಲಿ ಅದಕ್ಕೆ ಹಿಂದೆ ಕನಸಿನಲ್ಲಿ ಸಹ ಮುಟ್ಟಿರಲಿಲ್ಲ. ಭ್ರಮಿಸಿ ಕಣ್ಣುಗಳಲ್ಲಿ ಒಂದು ವಿಲಕ್ಷಣವಾದ ಪ್ರಕಾಶವನ್ನು ತಾಳಿದವನಾಗಿ ರಂಗಪಿಳ್ಳೆಯನ್ನು ಬುರುಗುಟ್ಟಿ ನೋಡುತ್ತ ಸುಮ್ಮನೆ ನಿಂತನು.

ರಂಗಪಿಳ್ಳೆ "ಯಾರು ಯಾರೋ ನಿನ್ನನ್ನು ಬಂದು ನೋಡಿರಬಹುದು. ಈ ಕಾಲದಲ್ಲಿ ಬಡವರನ್ನು ನಂಬುವರಾರು? ಅವರಿಗೆ ಯಾರಾಗುವರು?

ನಿಮಗಿರುವ ಕಷ್ಟಗಳು ಯಾರಿಗೆ ಗೊತ್ತು ? ತಮ್ಮಾ ? ಈ ಹಣ ನಿನ್ನದು. ಕಾರ್ಯ ಜಯಸಿದರೂ ಸರಿಯೇ—ಸೋತರೂ ಸರಿಯೇ. ಶ್ರೀರಂಗನೆಲ್ಲಿ? ನಿಜವೇನು ? " ಎಂದರು.

ಅಧ್ಯಾಪಕನಾದ ಮುನಿಸಾಮಿ " ನಿಮ್ಮೊಡನೆ ನಾನು ಸುಳ್ಳು ಹೇಳ ಬಾರದು. ಶ್ರೀರಂಗನನ್ನು ಧನಪಾಲ ಶೆಟ್ಟಿಯಾರರ ಮನೆಯಲ್ಲಿ ಬೀಗ ಹಾಕಿ ಕಾವಲಿಟ್ಟಿರುವರು. ಅವನು ಶೆಟ್ಟಿಯಾರಿಗೆ ೧೫೦ ರೂಪಾಯಿವರೆಗೂ ಹಿಂದೆಯೇ ಸಾಲಗಾರನಾಗಿದ್ದಾನೆ, ಗೊತ್ತೆ ? ನಾಳೆ ನೆಟ್ಟಗೆ ಮುನಿಸಿಪಲ್ ಆಫೀಸಿಗೆ ಹೋಗುವಾಗ ಅವನನ್ನು ಜೊತೆಗೆ ಕರೆದುಕೊಂಡು ಹೋಗು ವರು " ಎಂದನು.

" ಮುನಿಸಾಮಿ ! ಇವರಲ್ಲಿ ಎಷ್ಟು ಖರ್ಚಾದರೂ ಸರಿಯೇ, ನಾನು ಹೇಳಿದಂತೆ ಮಾಡು ! " ಎಂದರು ರಂಗಪಿಳ್ಳೆಯವರು.

ಒಳಗೆ ಶ್ರೀರಂಗನ ತಾಯಿಯಾದ ಮುದುಕಿಯೊಂದಿಗೆ ಅವನು ಸ್ವಲ್ಪ ಹೊತ್ತು ಮಾತಾಡಿ ಮತ್ತೆ ಹೊರಕ್ಕೆ ಬಂದು ರಂಗಪಿಳ್ಳೆಯನ್ನು ಮಾರಿಯ ಮ್ಮನ ಗುಡಿಯ ಜಗಲಿಯ ಮೇಲೆ ಕೂರಿಸಿಬಿಟ್ಟು ಅವರು ಕರೆದು ಕೊಂಡು ಬಂದಿದ್ದ ಕುದುರೆ ಗಾಡಿಯಲ್ಲಿ ತಾನು ಹತ್ತಿ ಧನಪಾಲ ಶೆಟ್ಟಿಯ ಮನೆಗೆ ಹೋದನು.

ಶೆಟ್ಟಿಯವರೂ ಅವರ ಮನೆ ಬೀದಿಯ ಜಗುಲಿಯ ಮೇಲೆ ಸ್ನೇಹಿತ ರೊಡನೆ ಕೂತುಕೊಂಡಿದ್ದರು. ಒಂದು ' ಹರ್ರಿಕೇನ್ ' ದೀಪ, ಮತ್ತು ಕಾಗದ ಸೀಸವ ಕಡ್ಡಿಯ ಸಹಿತವಾಗಿ ಕೂತಿದ್ದರು. ಮುನಿಸಾಮಿ ಗಾಡಿ ಯಿಂದಿಳಿದು ಶೆಟ್ಟಿಯವರ ಕಾಲಿಗೆ ಬಿದ್ದನು.

" ಸಾಮಿ ! ಯಜಮಾನರು ಕ್ಷಮಿಸಬೇಕು. ಶ್ರೀರಂಗನ ತಾಯಿ ಸಾಯುವ ಹಾಗೆ ಬಿದ್ದಿದ್ದಾಳೆ. ನಾವು ಹೋಗುವುದರೊಳಗೆ ತೀರಿ ಹೋಗು ವಳೋ ಏನೋ! ಶ್ರೀರಂಗನನ್ನು ಹೇಗಾದರೂ ಕಳುಹಿಸಬೇಕು" ಎಂದನು.

ಶೆಟ್ಟಿಯವರು " ಮುದುಕಿಗೆ ಇದ್ದಕ್ಕೆ ಇದ್ದಹಾಗೆ ಏನು ಬಂದು ಬಿಟ್ಟಿದೆ ? ಸುಳ್ಳು ! ಮೊದಲಿಯಾರರು ಏನಾದರೂ ಹೇಳಿ ಕಳುಹಿಸಿ ದರೋ ಏನು ? " ಎಂದರು.

"ಅಯ್ಯೋ ! ಮೇಲೆ ದೇವರು ಎಲ್ಲವನ್ನೂ ನೋಡುತ್ತಿದ್ದಾನೆ. ಸುಳ್ಳು ಹೇಳಿ ಬದುಕಲು ಸಾಧ್ಯವೇ ? ನಿಜವಾಗಿಯೂ ಮುದುಕಿಗೆ ಭೇದಿ. ಅವಳು ಬದುಕಲಾರಳು. ನಿನ್ನೆಯಿಂದ ಇಪ್ಪತ್ತು ಸಲ ಭೇದಿಯಾಗಿಬಿಟ್ಟಿದೆ. ಮಾತಿಲ್ಲ ಕಥೆಯಿಲ್ಲ. ಹೇಗಾದರೂ ಮಾಡಿ ಅಣ್ಣನನ್ನು ಕಳುಹಿಸಿಕೊಡಿ. ಇಲ್ಲದೆ ಹೋದರೆ ಜೀವವು ಒದ್ದಾಡಿ ಹೋಗುವುದು" ಎಂದು ಕಣ್ಣೀರು ಸುರಿಸುತ್ತ ಬಿಕ್ಕಿ ಬಿಕ್ಕಿ ಅತ್ತನು.

ಶೆಟ್ಟಿಯವರು ತಮ್ಮ ಗುಮಾಸ್ತೆಯೊಡನೆ " ಸರಿ ! ಶ್ರೀನಿವಾಸಯ್ಯ ರವರೇ, ನೀವು ಹೋಗಿರಿ. ಶ್ರೀರಂಗನನ್ನು ಕರೆದುಕೊಂಡು ಹೋಗಿ ಏನು ಸಮಾಚಾರವೆಂದು ನೋಡಿ ಬನ್ನಿರಿ" ಎಂದರು.

ಅಲ್ಲಿದ್ದವರೊಬ್ಬರು "ಇದು ಎಲ್ಲವೂ ಮೋಸ. ಶೆಟ್ಟಿಯವರು ಎಲ್ಲ ರನ್ನೂ ಒಂದೇ ರೀತಿಯಲ್ಲಿ ನಂಬುವುದು ಸ್ವಭಾವ" ಎಂದರು.

ಗುಮಾಸ್ತರಾದ ಶ್ರೀನಿವಾಸಯ್ಯರವರು ಮನೆಯೊಳಕ್ಕೆ ಹೋಗಿ, ಕುದುರೆ ಲಾಯದಿಂದ ಶ್ರೀರಂಗನನ್ನು ಕರೆದುಕೊಂಡು ಹಿತ್ತಲಿನ ದಾರಿ ಯಿಂದ ಗಾಡಿಯಿರುವ ಸ್ಥಳಕ್ಕೆ ಬಂದರು. ಮುನಿಸಾಮಿಯೂ ಹೋಗಿ ಅವರೊಡನೆ ನಿಂತನು.

"ಏನು ಯೋಚಿಸುತ್ತಿದ್ದೀರಿ—ಅಯ್ಯರವರೇ ? ಹತ್ತಿ ಗಾಡಿಯಲ್ಲಿ" ಎಂದರು ಧನಪಾಲ ಶೆಟ್ಟಿಯವರು.

ವೈಲಿಗೆ ಗಿಯ್ಲಿಗೆ ಎಲ್ಲಾ ಮರೆತು ಹೋಯಿತು. ಚುನಾವಣೆಯ ಸಮಯದಲ್ಲಿ ಅದೆಲ್ಲವನ್ನೂ ನೋಡಿದರೆ ಆಗುತ್ತದೆಯೇ ? ಗಾಡಿಯಲ್ಲಿ ಎಲ್ಲರೂ ಹತ್ತಿದರು.

೫

ಜೇಮ್ಸ್ ಪೇಟೆಯಲ್ಲಿ ಶ್ರೀರಂಗನ ಮನೆಬಾಗಿಲಲ್ಲಿ ಗಾಡಿ ನಿಂತ ಕೂಡಲೆ ಮನೆಯೊಳಗೆ "ಅಯ್ಯೋ ! ಅಯ್ಯೋ !" ಎಂದು ಧ್ವನಿಗಳು ಕೇಳಿ ಬಂದವು.

"ಕಥೆ ಸುಳ್ಳಲ್ಲ, ನಿಜವೇ" ಎಂದು ಶ್ರೀನಿವಾಸಯ್ಯರವರು ತಮ್ಮೊಳಗೆ ಹೇಳಿಕೊಳ್ಳುತ್ತ "ಶ್ರೀರಂಗಾ, ಒಳಗೆ ಹೋಗಿ ವಿಚಾರಿಸಿ ಬಂದು ಹೇಳು." ಎಂದರು.

ಶ್ರೀರಂಗನೂ, ಮುನಿಸಾಮಿಯೂ ಒಳಗೆ ಹೋದರು. ಸ್ವಲ್ಪ ಹೊತ್ತಾದಮೇಲೆ ಮುನಿಸಾಮಿ ಹೊರಗೆ ಬಂದು ಅಯ್ಯರವರ ಬಳಿ "ಪ್ರಾಣ ಹೋಗಿದೆ" ಎಂದು ಮೆತ್ತಗೆ ಹೇಳಿ ತಕ್ಷಣವೇ ಮತ್ತೆ ಮನೆಯೊಳಗೆ ಹೋದನು.

"ಅಯ್ಯಯ್ಯೋ! ಹೋಗಿಬಿಟ್ಟೆಯಾ! ಅಯ್ಯಯ್ಯೋ! ಮನೆ ಹಾಳು ಬಿತ್ತೇ!" ಎಂದು ಹಲವು ಬಗೆಯಲ್ಲಿ ಕೂಗಿಕೊಳ್ಳುವ ರೋದನ ಸ್ವರವು ಮನೆಯೊಳಗಿಂದ ಕೇಳಿಸಿತು.

"ಏನು ಈ ಮನೆಯಲ್ಲಿ ಸಮಾಚಾರ?" ಎಂದು ಶ್ರೀನಿವಾಸಯ್ಯ ರವರು ತಮ್ಮ ಬಳಿ ಬಂದು ನಿಂತಿದ್ದ ಹುಡುಗನೊಬ್ಬನನ್ನು ಕೇಳಿದರು.

"ಸಮಾಚಾರವೇನು? ವಾಂತಿ ಭೇದಿ! ಮುದುಕಿ ಸತ್ತುಹೋದಳು" ಎಂದು ಹುಡುಗನು ಹೇಳಿದನು.

ಶ್ರೀನಿವಾಸಯ್ಯರಿಗೆ ಗಾಬರಿಯಾಯಿತು. ಹೊಲೆಯರಬೀದಿ, ಅದರ ಮೇಲೆ ವಾಂತಿ ಭೇದಿ, ಕೇಳಬೇಕೇ? ಸರಿ, ಇನ್ನಿಲ್ಲಿರುವುದು ಸರಿಯಲ್ಲ ವೆಂದು ತೀರ್ಮಾನಿಸಿದರು. ಮುನಿಸಾಮಿಯೂ ಹೊರಗೆ ಬಂದನು.

'ಸ್ವಾಮಿ! ಮುದುಕಿ ಸತ್ತಹಾಗೆಯೇ ಕಾಣುತ್ತೆ. ಉಸಿರೇ ಇಲ್ಲ. ಶ್ರೀರಂಗನಿಗೆ ನಾನು ಜವಾಬ್ದಾರಿ. ನೀವು ಹೋಗಿರಿ' ಎಂದನು. ಅಯ್ಯ ರವರು ಅವಸರವಾಗಿ ಮನೆಗೆ ಹಿಂತಿರುಗಿದರು.

ಒಳಗೆ, ಹಾಸಿಗೆಯಲ್ಲಿ ಮಲಗಿದ್ದ ಮುದುಕಿ ಮಗನನ್ನು ಹತ್ತಿರ ಬಾರೆಂದು ಸಂಜ್ಞೆ ತೋರಿಸಿದಳು ಶ್ರೀರಂಗನು ತನ್ನ ಕಿವಿಯನ್ನು ತಾಯಿಯ ಮುಖದ ಹತ್ತಿರ ತೆಗೆದುಕೊಂಡು ಹೋದನು. "ಅಪ್ಪಾ! ಶ್ರೀರಂಗಾ! ಸಾವಿರ ರೂಪಾಯಿ ಕೊಡುತ್ತೇವೆಂದು ಹೇಳುತ್ತಾರೆಯೇ! ಯಾರಾದರೂ ಬೇಡವೆನ್ನಬಹುದೇ! ಹುಚ್ಚನಾಗಬೇಡ. ಮುದುಕಿಯ ಮಾತನ್ನು ಕೇಳು!" ಎಂದಳು.

ಶ್ರೀರಂಗನು 'ಇದೇನು ಮೋಸ! ಇದಕ್ಕೇನೇ ಕೂಗಿದಿರಾ!' ಎಂದನು.

ಮುನಿಸಾಮಿ "ಅಯ್ಯಯ್ಯೋ" ಎಂದನು. ಜೊತೆಗೆ ಇತರರೂ ಇದೇ ರೀತಿ ಕೂಗಿಕೊಂಡು ದೊಡ್ಡ ಗದ್ದಲವನ್ನು ಮಾಡಿದರು.

ಮುದುಕಿ ಮತ್ತೊಮ್ಮೆ 'ಮಗನೆ!' ಎಂದಳು. ನನಗೆ ಭೇದಿಯೂ ಇಲ್ಲ ಏನೂ ಇಲ್ಲ. ಆದರೆ ಹೇಗೋ ಆಗಿದೆ. 'ನಶ್ಯದ ಅಂಗಡಿಯವರು ತಂದಿರುವ ಈ ಸಾವಿರ ರೂಪಾಯಿಯನ್ನು ತೆಗೆದುಕೊಂಡು, ಈ ಹಾಳು ಉದ್ಯೋಗವನ್ನು ಬಿಟ್ಟು, ಸಾಲಗಳನ್ನು ತೀರಿಸಿಕೊಂಡು, ಮಾನದಿಂದ ಬದುಕು, ನಾನು ಹೆಚ್ಚು ದಿನ ಬದುಕಿರುವುದಿಲ್ಲ' ಎಂದು ಮೆತ್ತಗೆ ಒಂದೊಂದು ಮಾತಾಗಿ ಹೇಳಿದಳು.

ಶ್ರೀರಂಗನಿಗೆ ಕೋಪ, ಬೇಸರ, ಭಯ, ಎಲ್ಲವೂ ಉಕ್ಕಿಬಂದು ಭ್ರಮೆಯುಂಟಾಗಿ ಏನೂ ತೋರದವನಾಗಿ ಸುಮ್ಮನೆ ನಿಂತನು.

"ಅಯ್ಯೋ, ಕುಯ್ಯೋ!" ಎಂದು ಮುನಿಸಾಮಿ ಚುಚ್ಚಿಕೊಟ್ಟ ಮೇರೆಗೆ ಮನೆಯಲ್ಲಿದ್ದವರೆಲ್ಲರೂ ಕೂಗಿದರು.

೬

"ಅನಂತರ ಶ್ರೀರಂಗನು ರಂಗಪಿಳ್ಳೆಯವರ ಎದುರಿಗೆ ಬಂದು ನಿಂತನು. ಗಾಡಿ ಹತ್ತು ಶ್ರೀರಂಗಾ! ಮೊದಲಿಯಾರನ ಮನೆಯಲ್ಲಿ ಎಲ್ಲವನ್ನೂ ಮಾತಾಡೋಣ" ಎಂದರು ರಂಗಪಿಳ್ಳೆಯವರು.

ಗಾಡಿ ಹತ್ತಿದಕೂಡಲೆ, "ಶ್ರೀರಂಗಾ! ಹೊಡೆಯಿತು ನಿನಗೆ ಅದೃಷ್ಟ. ಎಲ್ಲರೂ ಹಣ ಸಂಪಾದಿಸುತ್ತಾರೆ. ನೀನುಮಾತ್ರ ಏನುಪಾಪ ಮಾಡಿದ್ದೀಯ! ಏತಕ್ಕೆ ಹೀಗೆ ಉದಾಸೀನವಾಗಿದ್ದೀಯ? ನಿನಗೇನು ಬೇಕು ಹೇಳು! ನಾನಿದ್ದೇನೆ ಅದಕ್ಕೆ ಹೊಣೆಯಾಗಿ" ಎಂದು ಹೀಗೆಲ್ಲಾ ಮೊದಲಿಯಾರರ ಮನೆ ಸೇರುವವರೆಗೂ ರಂಗಪಿಳ್ಳೆಯವರು ಹೇಳುತ್ತಲೇ ಬಂದರು.

ರಂಗಪಿಳ್ಳೆಯವರು ಮೊದಲಿಯಾರರೊಡನೆ ಕೆಲವು ನಿಮಿಷ ಪ್ರತ್ಯೇಕವಾಗಿ ಮಾತಾಡಿದರು. ಅನಂತರ ಒಂದು ಬಿಳಿಯ ಬಟ್ಟೆಯಲ್ಲಿ ಗಂಟು ಕಟ್ಟಿಕೊಂಡು ಹೊರಗೆ ಬಂದು ಜಗುಲಿಯ ಮೇಲೆ ಕೂತಿದ್ದ ಶ್ರೀರಂಗನ ಮುಂದೆ ಅದನ್ನಿಟ್ಟು 'ಶ್ರೀರಂಗಾ! ಇಗೋ! ನಿನ್ನ ಆಯುಷ್ಯದಲ್ಲೆಲ್ಲಾ ಕಷ್ಟಪಟ್ಟರೂ ನಿನಗೆ ಇದು ಸಿಕ್ಕಲಾರದು! ನಿನ್ನ ಸಾಲಗಳೆಲ್ಲವನ್ನೂ ತೀರಿಸಿಕೊಂಡು ವ್ಯಾಪಾರ ಮಾಡು. ಇನ್ನೆಷ್ಟೋ ಇದೆ. ಮೊದಲಿಯಾರರು ನಿನಗೆ ಬೇಕಾದುದೆಲ್ಲವನ್ನೂ ಮಾಡುವರು' ಎಂದರು.

ಶ್ರೀರಂಗನು ಮೌನವಾಗಿದ್ದನು.

ವೀರರಾಘವ ಶೆಟ್ಟಿಯವರು ಚೀಲವನ್ನು ತೆಗೆದು ಶ್ರೀರಂಗನ ಮಡಲಿನಲ್ಲಿಟ್ಟು 'ಏಳು. ಪ್ರಮಾಣ ಮಾಡು. ಎಲ್ಲಾ ತೀರ್ಮಾನವಾಯಿತು. ಇನ್ನೇನು ಸಾವಕಾಶ?' ಎಂದರು.

ಶ್ರೀರಂಗನು ಹಣದ ಚೀಲವನ್ನು ತೆಗೆದು ಕೆಳಗಿಟ್ಟು ಒಂದು ನಿಮಿಷ ಯೋಚಿಸುವಂತೆ ಸುಮ್ಮನಿದ್ದನು. ಎಲ್ಲರೂ ಮೌನವಾಗಿ ಅವನೇನು ಹೇಳುವನೋ ಎಂದು ಕಾದಿದ್ದರು.

ಇದ್ದಕ್ಕೆ ಇದ್ದಹಾಗೆ ಶ್ರೀರಂಗನೆದ್ದು ಒಂದೇ ಹಾರು ಜಗುಲಿಯಿಂದ ಬೀದಿಗೆ ಹಾರಿ ಓಡಿಬಿಟ್ಟನು. ಕೆಲವರು ಹಿಂಬಾಲಿಸಿ ಹಿಡಿಯಲು ಹೋದರು. ಆದರೆ ಶ್ರೀರಂಗನು ಅವರ ಕಣ್ಣಿಗೆ ಕೂಡ ಕಾಣಿಸಲಿಲ್ಲ. ತಿರುಗಿ ಬಂದು "ಓಡಿಯೇ ಬಿಟ್ಟಿದ್ದಾನೆ" ಎಂದರು.

ಮೊದಲಿಯಾರರು ಹಣದ ಚೀಲವನ್ನು ತೆಗೆದು ಒಳಗಿಟ್ಟು 'ನೋಡಿದೆಯಾ! ಮೋಸ ಮಾಡಿಯೇಬಿಟ್ಟ, ಕಳ್ಳ' ಎಂದರು.

"ಏನೇ ಆದರೂ ಜಾತಿ ಸ್ವಭಾವವನ್ನು ತೋರಿಸಿಬಿಟ್ಟ!" ಎಂದರು ಎಲ್ಲರೂ.

ಮರುದಿನ ಮುನಿಸಿಪಲ್ ಆಫೀಸಿನಲ್ಲಿ ಚುನಾವಣೆಯ ಗದ್ದಲ. ಮೀಟಿಂಗಿನಲ್ಲಿ ಶ್ರೀರಂಗನು ಕಾಣಿಸಲಿಲ್ಲ.

"ತಾಯಿಯೂ ಸತ್ತುಹೋದಳು" ಎಂದರು ಕೆಲವರು.

"ಇಲ್ಲ. ಇಲ್ಲ. ಎಲ್ಲಾ ಮೋಸ" ಎಂದರು ಇತರರು.

ನಾಗಪಟ್ಟಣಕ್ಕೆ ಹೋಗಿದ್ದವರು ತಿರುಗಿ ಬಂದು ಸಿದ್ಧವಾಗಿದ್ದರು.

'ಧನಪಾಲ ಶೆಟ್ಟಿಯವರಿಗೆ ಇಪ್ಪತ್ತಾರು ಓಟು ಬರುವುದು' ಎಂದರೊಬ್ಬರು.

'ಇಲ್ಲಇಲ್ಲ. ಮೊದಲಿಯಾರರಿಗೆ ಹದಿನೇಳು, ಶೆಟ್ಟಿಯವರಿಗೆ ಹದಿನೇಳು ಬರುವುದು. ಚೀಟಿಯನ್ನೇ ಹಾಕಬೇಕಾಗುವುದು' ಎಂದರು ಮತ್ತೊಬ್ಬರು.

'ಎಲ್ಲಾ-ಹಣ' ಎಂದರೊಬ್ಬರು.

ಮತ್ತೊಬ್ಬರು 'ಹಣವನ್ನು ತೆಗೆದುಕೊಂಡೂ ಮೋಸ ಮಾಡುತ್ತಾರೆ ಕಳ್ಳರು' ಎಂದರು.

ಕೊನೆಯಲ್ಲಿ ಧನಪಾಲ ಶೆಟ್ಟಿಯವರಿಗೆ ಮೂವತ್ತುಮೂರು ಓಟುಗಳೂ ಮೊದಲಿಯಾರರಿಗೆ ಹತ್ತು ಓಟುಗಳೂ, ಬರಿಯ ಕಾಗದ ಒಂದೂ ಬಿದ್ದವು. ಈ ತೀರ್ಮಾನ ಹೇಳಿದ ಕೂಡಲೇ 'ಧನಪಾಲಶೆಟ್ಟಿಕೀ ಜೈ' ಎಂದು ಹೊರಗೆ ಕೂಡಿದ್ದ ಗುಂಪು ಕೂಗಿತು.

'ಲಂಚ, ಲಂಚ' ಎಂದು ಎದುರು ಕಕ್ಷಿಯವರು ಕೂಗಿಕೊಂಡರು.

ಮೊದಲಿಯಾರರು "ಶ್ರೀರಂಗನೊಬ್ಬನೇ ಯೋಗ್ಯ" ಎಂದರು.



# ೧೦. ಮುಕುಂದನು ಹೋಲೆಯನ್ನಾದ ಕಥೆ

## ೧

ಹುಡುಗರೂ ಕೋತಿಗಳೂ ಸೇರಿದರೆ ಆಟಕ್ಕೆ ಏನು ಕಡಿಮೆ ? ವೇಲಂ ಪಟ್ಟಿಯ ಹುಣಿಸೇ ತೋಪಿನಲ್ಲಿ ಊರ ಹುಡುಗರೆಲ್ಲರೂ ಸೇರಿ ಮರ ಗಳನ್ನೇರುವುದು, ಧುಮುಕುವುದು, ಕೇಕೆ ಹಾಕುವುದು, ಕೋತಿಗಳನ್ನು ಅಟ್ಟಿ ಓಡಿಸುವುದು, ಈ ರೀತಿಯಾಗಿ ಆಡಿಕೊಳ್ಳುತ್ತಿದ್ದರು. ಕೆಲವೆಡೆ ಕೋತಿ ಗಳದು ಜಯ. ಆಗ್ಗೆ ಅವುಗಳ ಗುಂಪಿನಲ್ಲಿದ್ದ ದೊಡ್ಡ ಕೋತಿ "ಉರ್" ಎಂದು ಕೂಗುವಾಗ ಕೆಲವು ಹುಡುಗರು ಆಟವನ್ನು ಮರೆತು ಸ್ವಲ್ಪ ಭಯ ಪಡುವರು. ಕೋತಿಮರಿಗಳಿಗೆ, ಪಾಪ, ಆಪತ್ತೇ ಆಗಿದ್ದಿತು. ಆ ಆಟ ಗಳಲ್ಲಿ ಅವುಗಳಿಗೆ ತಮಾಷೆ ಏನೂ ತೋರಲಿಲ್ಲ. ಭಯಪಟ್ಟು ಓಡಿ ಓಡಿ ರೆಂಬೆಯಿಂದ ರೆಂಬೆಗೆ ಹಾರಿ ಹುಡುಗರ ಹಿಂಸೆಯಿಂದ ಪಾರಾಗುವ ದಾರಿ ಯನ್ನು ಹುಡುಕಿದವು. ಹುಡುಗರಿಗಾದರೋ ಇದು ಬಹು ವಿನೋದವಾಗಿತ್ತು. ಅವರ ಕೇಕೆಗಳೂ ಕೋತಿಗಳ ಕೀಚ ಕೀಚ ಧ್ವನಿಯೂ ಊರಿಗೆ ಕೇಳಿ ಸುವುದು.

ಇದ್ದಕ್ಕಿದ್ದ ಹಾಗೆ ಪೂರ್ವ ದಿಕ್ಕಿನಲ್ಲಿ ಹುಡುಗನೊಬ್ಬನು ದೊಡ್ಡದಾಗಿ ಕೂಗುಹಾಕಿದನು. ಎಲ್ಲರೂ ಏನೋ ಅಪಾಯ ಸಂಭವಿಸಿತೆಂದು ಅತ್ತಕಡೆಗೆ ಓಡಿದರು. ಮುಕುಂದನ ಮೇಲೆ ಒಂದು ದೊಡ್ಡ ಕೋತಿ ಹಾರಿ ಅವನ ಮೈಯೆಲ್ಲವನ್ನೂ ಪರಚಿ ರಕ್ತ ಗಾಯ ಮಾಡಿ ಮರಿಯನ್ನು ಬಿಗಿದಪ್ಪಿ ಕೊಂಡಿತ್ತು. ಮುಕುಂದನು ಕೋತಿ ಮರಿಯೊಂದನ್ನು ಅಟ್ಟಿ ಆಟವಾಡುತ್ತಿ ದ್ದಾಗ ಅದು ರೆಂಬೆಯಿಂದ ಜಾರಿ ಕೆಳಗೆ ಬೀಳಲು ಅವನು ಅದನ್ನು ಕೈಯಲ್ಲಿ ತೆಗೆದುಕೊಂಡು ಓಡುತ್ತಲೇ ತಾಯಿ ಕೋತಿಯು ಮರದಿಂದ ಚೀರಿ ಅವನ ಮೇಲೆ ಹಾರಿ ಈ ರೀತಿಯಾಗಿ ಅವನ ಮೇಲೆ ಛಲವನ್ನು ತೀರಿಸಿಕೊಂಡಿತು. ಮುಕುಂದನು ದಿಗ್ಭ್ರಾಂತನಾಗಿ ಏನು ಮಾಡಲೂ ತೋರದೆ ಕೋತಿಮರಿ

ಯನ್ನು ಗಟ್ಟಿಯಾಗಿ ಹಿಡಿದುಕೊಂಡನು ಇದನ್ನು ನೋಡಿ ಕೋತಿ ಮತ್ತಷ್ಟು ಆವೇಶದಿಂದ ಅವನನ್ನು ಗಾಯಪಡಿಸಿತು. "ಮರಿಯನ್ನು ಬಿಟ್ಟುಬಿಡು, ಮರಿಯನ್ನು ಬಿಟ್ಟುಬಿಡು" ಎಂದು ಹುಡುಗರು ಕೂಗಿಕೊಂಡರೂ ಅವನಿಗೆ ತಿಳಿಯಲಿಲ್ಲ ಆ ಬಾಲಕರಲ್ಲಿ ಯಾರೂ ಹತ್ತಿರ ಹೋಗಲು ಧೈರ್ಯಪಡ ಲಿಲ್ಲ ಕೋತಿಯೋ ಬಹು ದೊಡ್ಡದು. ಮಹಾ ಕೋಪಾವೇಶದಲ್ಲಿತ್ತು.

ಇದೆಲ್ಲವನ್ನೂ ನೋಡುತ್ತಿದ್ದ ಮಾರಿ ಎನ್ನುವ ಸಣ್ಣ ಹುಡುಗ—'ಸತ್ತು ಹೋಗುವನಲ್ಲಾ' ಎಂದು ಕೂಗಿ ಒಂದೇ ಧುಮುಕಿನಲ್ಲಿ ಮುಕುಂದನ ಕೈಯಲ್ಲಿದ್ದ ಕೋತಿಮರಿಯನ್ನು ಕಿತ್ತುಕೊಂಡು ಓಡಿದನು. ತಕ್ಷಣವೇ ಕೋತಿ ಮುಕುಂದನನ್ನು ಬಿಟ್ಟು ಮಾರಿಯ ಮೇಲೆ ಹಾರಿತು. ಹಾರಿದ ಕೂಡಲೆ ಮಾರಿಯು ಆ ಮರಿಯನ್ನು ಕೆಳಗೆ ಹಾಕಿ ನೆಲದ ಮೇಲಿದ್ದ ಒಂದು ಸಣ್ಣ ಕೋಲನ್ನು ತೆಗೆದುಕೊಂಡು ಕೋತಿಯನ್ನು ಎದುರಿಸಿ ನಿಂತನು. ಕೋತಿ ಮರಿಯು ಕೆಳಗೆ ಬಿದ್ದು ಓಡಲಾರಂಭಿಸಲು ತಾಯಿಯು ಹುಡುಗನ ಮೇಲೆ ಹಾರುವದನ್ನು ಬಿಟ್ಟು ಮರಿಯ ಕಡೆ ಓಡಿತು. ಮರಿಯು ತಾಯಿಯ ಹೊಟ್ಟೆಯನ್ನು ಬಿಗಿದಪ್ಪಿಕೊಳ್ಳಲು, ಎರಡೂ ಮರದ ಮೇಲೆ ಹತ್ತಿ ಎತ್ತರ ದಾದ ರೆಂಬೆಯಲ್ಲಿ ಸೇರಿಕೊಂಡು ಸುಮ್ಮನೆ ಏನೂ ನಡೆಯದಿದ್ದಂತೆ ಅಲ್ಲಿ ಕುಳಿತುಕೊಂಡವು.

ಮುಕುಂದನು ಸ್ಮರಣೆ ತಪ್ಪಿದವನಾಗಿ ಕೆಳಗೆ ಬಿದ್ದಿದ್ದನು. ಹುಡುಗ ರೆಲ್ಲರೂ ಭಯಪಟ್ಟು 'ಮುಕುಂದನು ಸತ್ತುಹೋದನು' 'ಕೋತಿ ಮುಕುಂದ ನನ್ನು ಕೊಂದುಹಾಕಿತು' ಎಂದು ಕೂಗುತ್ತ ಊರಿನ ಕಡೆ ಓಡಿದರು. ಮಾರಿಯು ಮಾತ್ರ ಓಡದೆ 'ಎಲೋ ಚಿನ್ನಾ! ಹೋಗಿ ಅಮ್ಮನನ್ನು ಕೇಳಿ ಒಂದು ಪಾತ್ರೆಯಲ್ಲಿ ನೀರು ತೆಗೆದುಕೊಂಡು ಬಾ' ಎಂದು ಹೇಳಿ ಮುಕುಂ ದನ ಬಳಿ ಕುಳಿತುಕೊಂಡು ಅವನ ಮುಖವನ್ನು ಸವರುತ್ತಿದ್ದನು. ಚಿನ್ನನು ಕೇರಿಗೆ ಓಡಿಹೋಗಿ ಒಂದು ಮಡಿಕೆಯಲ್ಲಿ ನೀರು ತಂದನು. ಅದನ್ನು ಮಾರಿ ತೆಗೆದುಕೊಂಡು ಮುಕುಂದನ ಮುಖದಲ್ಲಿ ನೀರನ್ನು ಎರಚುತ್ತಲೇ ಅವನಿಗೆ ಪ್ರಜ್ಞೆ ಬಂದಿತು. ಆದರೆ ಗಾಯಗಳಿಂದ ರಕ್ತ ಸುರಿಯುತ್ತಲೇ ಇತ್ತು.

"ಚಿನ್ನಾ, ನೀನು ಒಂದು ಕಡೆ ಹಿಡಿ, ನಾನು ಒಂದು ಕಡೆ ಹಿಡಿಯು ತ್ತೇನೆ. ಇಬ್ಬರೂ ಎತ್ತಿ ಅವನ ಮನೆಗೆ ತೆಗೆದುಕೊಂಡು ಹೋಗೋಣ ಬಾ"

ಎಂದು ಮಾರಿ ಹೇಳಲು ಇಬ್ಬರೂ ಸೇರಿ ಮುಕುಂದನನ್ನು ಎತ್ತಿಕೊಂಡು ಹೋದರು. ಮಾರಿಯೂ ಚಿನ್ನನೂ ಸಣ್ಣ ಹುಡುಗರೇನೋ ಅಹುದು. ಆದರೆ ಬಡವರ ಮಕ್ಕಳಾದುದರಿಂದ ಕೆಲಸಕ್ಕೆ ಅಂಜಲಿಲ್ಲ. ಸುಖದಲ್ಲಿ ಬೆಳೆಯುವ ಮಕ್ಕಳು ಮಾಡಲಾರದ ಕೆಲಸಗಳೆಲ್ಲವನ್ನೂ ಬಡವರ ಮನೆಯಲ್ಲಿ ಹುಟ್ಟುವ ಮಕ್ಕಳು ಧೈರ್ಯವಾಗಿ ಮಾಡುವರು. ಇಲ್ಲದಿದ್ದರೆ ಅವರು ಬದುಕಲು ಹೇಗೆ ಸಾಧ್ಯ?

೨

ಮುಕುಂದನು ತಂದೆಯಿಲ್ಲದ ಮಗು. ಅವನ ತಂದೆಗೆ ಒಂದು ಕಾರಣವೂ ಇಲ್ಲದೆ ಬಂದ ಜ್ವರವು ಒಂದು ತಿಂಗಳು ಬಿಡದೆ ಇದ್ದು ಊರ ಪಂಡಿತನು ಏನು ಔಷಧ ಕೊಟ್ಟರೂ ನಿಲ್ಲಲಿಲ್ಲ. ಮೂವತ್ತೊಂದನೆ ದಿನ ರಾತ್ರಿ ಹೆಂಡತಿಯನ್ನೂ ಮಗನನ್ನೂ ದಿಕ್ಕಿಲ್ಲದವರನ್ನಾಗಿ ಮಾಡಿ ಸತ್ತನು. ಸೀತಮ್ಮನು ದೈವಭಕ್ತಳು. ಗಂಡ ತೀರಿಕೊಂಡ ಮೇಲೂ ಧೈರ್ಯ ತಾಳಿ ಹುಡುಗನನ್ನು ಬೆಳೆಸುತ್ತ ಬಂದಳು. ಊರಲ್ಲಿ ತನ್ನ ಗಂಡನು ಅಲ್ಲಲ್ಲಿ ಕೊಟ್ಟಿದ್ದ ಚಿಲ್ಲರೆ ಹಣವನ್ನೆಲ್ಲ ವಸೂಲು ಮಾಡಿ ಅವನಿಟ್ಟು ಹೋದ ನಾಲ್ಕು ಎಕರೆ ಖುಷ್ಕಿ ಹೊಲವನ್ನು ಒಬ್ಬ ಒಳ್ಳೆಯ ರೈತನಿಗೆ ಗುತ್ತಿಗೆಗೆ ಕೊಟ್ಟು ಸಂಸಾರ ಮಾಡುತ್ತಾ ಧೈರ್ಯವಾಗಿ ಜೀವನವನ್ನು ನಡೆಸುತ್ತ ಬಂದಳು. ಪಾಪ, ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡ ಸೀತಮ್ಮನಿಗೆ ಒಂದೊಂದು ವೇಳೆ ಪ್ರಪಂಚದಲ್ಲಿ ಜುಗುಪ್ಸೆ ಹುಟ್ಟುತ್ತಿತ್ತು. ದಿಕ್ಕಿಲ್ಲದ ಬಾಳಿನ ಕಷ್ಟಗಳನ್ನು ಸಹಿಸಿಕೊಳ್ಳುವುದು ಯಾರಿಗಾದರೂ ಕಷ್ಟವಲ್ಲವೇ? ಆದರೆ ಈಶ್ವರನಲ್ಲಿ ನಂಬಿಕೆಯೂ ಆಚಾರಶೀಲತೆಯೂ ಇವಳನ್ನು ಕಾಪಾಡಿದವು.

ಆ ದಿನ ಸೀತಮ್ಮನು ಸ್ನಾನ ಮಾಡಿ ಪೂಜೆಯನ್ನು ಮುಗಿಸಿ ಅಡಿಗೆ ಮಾಡುತ್ತಿದ್ದಳು. ಇದ್ದಕ್ಕಿದ್ದ ಹಾಗೆ ಮಾರಿಯೂ ಚಿನ್ನನೂ 'ಅಮ್ಮಾ ಅಮ್ಮಾ' ಎಂದು ಕೂಗುತ್ತ ಒಳಕ್ಕೆ ನುಗ್ಗಿ ಮೈಯೆಲ್ಲ ರಕ್ತಮಯವಾಗಿದ್ದ ಮುಕುಂದನನ್ನು ಅವಳ ಮುಂದೆ ಇಳಿಸಿ ಮಲಗಿಸಿದರು. ಬೆಚ್ಚಿ ಬಿದ್ದ ತಾಯಿಯು ಒಂದೇ ಹಾರಿನಲ್ಲಿ ಕೂಸಿನ ಬಳಿ ಬಂದು 'ಅಯ್ಯೋ ನನ್ನ ಕಂದ!' ಎಂದು ತಲೆಯನ್ನೆತ್ತಿ ಹಿಡಿದು 'ಏನೋ ಮಾಡಿದಿರಿ? ದುಷ್ಟ ಹುಡುಗರಿರಾ!'

ಎಂದು ಕೂಗಿಕೊಂಡಳು. ಇವಳು ಬೆಚ್ಚಿಬಿದ್ದು ಕೂಸಿನ ಬಳಿ ಬರಲು ಹಾರಿದುದು, ಮತ್ತು ತೋಪಿನಲ್ಲಿ ಕೋತಿ ತನ್ನ ಮರಿಯನ್ನು ಕಾಯಲು ಚೀರಿಕೊಂಡು ಹಾರಿದುದು ಹೋಲಿಸಬಹುದಾಗಿದ್ದವು. ಹೆತ್ತ ಹೊಟ್ಟೆಯಂದರೆ ಒಂದೇ ಅಲ್ಲವೇ ? ಕೋತಿಯಾದರೇನು ? ಮನುಷ್ಯಳಾದರೇನು ?

ನಡೆದುದನ್ನೆಲ್ಲ ಮಾರಿ ಹೇಳಿದನು. ಕೇಳಿದ ಕೂಡಲೆ ಅವಳ ಅಂತಃಕರಣದಲ್ಲಿ ಉದ್ಭವಿಸಿದ ಕೃತಜ್ಞತೆಯು ಅವಳ ಮುಖದಲ್ಲಿ ಪ್ರಕಾಶಿಸುತ್ತಿತ್ತು.

" ನೀವು ಯಾರಪ್ಪಾ ? " ಎಂದಳು.

' ನಾವು ಹೊಲೆಯ ಹುಡುಗರು ತಾಯಿ ' ಎಂದನು ಮಾರಿ.

' ಹೊಲೆಯ ಹುಡುಗರೇ ? ಎಲೋ ಪಾಪಿಗಳಿರಾ ! ಮನೆಯೊಳಗೆ ನುಗ್ಗಿದಿರಲ್ಲೊ ! ಅಯ್ಯೋ ದೇವರೇ ! ನಾನೇನು ಮಾಡಲಿ ? ಅಡಿಗೆ ಮನೆಯೊಳಗೇ ಬಂದಿರಲ್ಲೊ ! ಅಯ್ಯೋ ಕಡುಪಾಪಿಗಳೇ ! ' ಎಂದು ಎಲ್ಲವನ್ನು ಮರೆತು ದೊಡ್ಡದಾಗಿ ಕೂಗಿಕೊಂಡು ಒಂದು ಸೌದೆ ಕಟ್ಟಿಗೆಯನ್ನು ತೆಗೆದುಕೊಂಡು ಬಲವಾಗಿ ಚಿನ್ನನ ಮೇಲೆ ಬೀಸಿದಳು. ಮಾರಿ ಆ ಕ್ಷಣವೇ ಅಡ್ಡಲಾಗಿ ಹಾರಿ ನಿಂತನು. ಕಟ್ಟಿಗೆಯು ಅವನ ಕಾಲಿನ ಮೇಲೆ ಬಿದ್ದು ಗಾಯವಾಯಿತು. ಅವನು ಕೆಳಕ್ಕೆ ಬಿದ್ದನು. ಚಿನ್ನನು ಕೂಗಿಕೊಳ್ಳುತ್ತ ಬೀದಿಯ ಕಡೆ ಓಡಿದನು.

' ಹೊಲೆಯ ಹುಡುಗನು ಮನೆಯೊಳಕ್ಕೆ ನುಗ್ಗಿ ನನ್ನ ಜನ್ಮವನ್ನೇ ಹಾಳುಮಾಡಿನು. ಸಾಲದುದಕ್ಕೆ ಊರಿಗೆಲ್ಲ ತಿಳಿಯಲೆಂದು ಕೂಗಿಕೊಂಡು ಓಡುತ್ತಾನೆ ನೋಡು ! ' ಎಂದು ಸೀತಮ್ಮನು ಮೊರೆಯಿಟ್ಟಳು.

ಕೆಳಕ್ಕೆ ಬಿದ್ದ ಮಾರಿಯು ಮೆಲ್ಲಗೆ ಎದ್ದು ಗಾಯವಾದ ಕಾಲನ್ನು ಕೈಯಿಂದ ಬಿಗಿಹಿಡಿದು ' ಅಮ್ಮಾ, ನಿನ್ನ ಮಗನನ್ನು ನಾನು ಕೋತಿಯ ಕೈಯಿಂದ ತಪ್ಪಿಸಿದೆನು. ಅದಕ್ಕೆ ಪ್ರತಿಯಾಗಿ ನನ್ನ ಕಾಲನ್ನು ಮುರಿದಿರುವೆ.' ಎಂದನು.

'ನೀನೂ ನಿನ್ನ ಕೋತಿಯೂ ನಾಶವಾಗಿ ಹೋಗ! ಈ ಹೊಲೆಮೈಲಿಗೆಯನ್ನು ಹೇಗೆ ನೀಗಿ ನಾನು ಗತಿ ಕಾಣುವುದು ? ಅಯ್ಯೋ ನೆರಳು ಬಿದ್ದರೂ

ಮೈಲಿಗೆ ಆಗುತ್ತದೆ. ಮನೆಯೊಳಗೆ ದೇವರನ್ನಿಟ್ಟಿರುವ ಸ್ಥಳಕ್ಕೇ ಬಂದು ಬಿಟ್ಟರಲ್ಲಾ! ಇವರು ನಾಶವಾಗಲಿ! ದೇವರೇ, ಕರುಣಿಸಿ ಕಾಪಾಡು, ಸ್ವಾಮಿ' ಎಂದು ಹಲುಬಿದಳು.

ಮಾರಿ ಇನ್ನೂ ಕಾಲನ್ನು ಅದುಮಿಕೊಂಡೇ ನಿಂತನು. 'ಎಲೋ, ದೂರ ಹೋಗೋ ಹೊಲೆಯಾ' ಎಂದು ಮತ್ತೊಂದು ಕಟ್ಟಿಗೆಯನ್ನು ತೆಗೆದು ಕೊಂಡು ಮೈಮರೆತು ಬೀಸಿ ಅವನನ್ನು ಹೊಡೆದಳು. ಮೊದಲಿಗಿಂತಲೂ ಬಲವಾದ ಏಟು ಬಿತ್ತು. ತಾಳಲಾರದೆ ಬೊಬ್ಬೆಹಾಕುತ್ತ, ಪಾಪ, ಹುಡು ಗನು ಕಾಲನ್ನು ಹಿಡಿದುಕೊಂಡೇ ಕುಂಟಿಕೊಂಡು ಓಡಿದನು.

ಬೀದಿಯಲ್ಲಿ ದೊಡ್ಡ ಗುಂಪು ಸೇರಿತು. "ಏನು? ಏನು?" ಎಂದು ಕೆಲವರು ಕೇಳುತ್ತಲೂ ಮತ್ತೆ ಕೆಲವರು ಉತ್ತರ ಹೇಳುತ್ತಲೂ ದೊಡ್ಡ ಹಾಹಾಕಾರವೇ ಆಯಿತು. ಮಾರಿ ಚಿನ್ನರ ತಾಯಿಯೂ ಕೇರಿಯಿಂದ ಬಂದು ಬೀದಿಯ ಕೊನೆಯಲ್ಲಿ ನಿಂತು 'ಅಯ್ಯೋ ನನ್ನ ಮಕ್ಕಳನ್ನು ಕೊಲ್ಲುತ್ತಾರಲ್ಲ' ಎಂದು ದೊಡ್ಡ ಕೂಗು ಹಾಕುತ್ತಿದ್ದಳು. ಹೆತ್ತ ತಾಯಿಯ ಸಂಕಟವೆಂದರೆ ಎಲ್ಲಿಯೂ ಒಂದೇ ವಿಧವಾದುದೇ. ಕೋತಿಯಾದರೇನು? ಯಾವ ಕುಲವಾದರೇನು?

೩

ಇದಾದ ಮೇಲೆ ಒಂದು ವರ್ಷವಾಯಿತು. ಮುಕುಂದನು ದೊಡ್ಡ ಹುಡುಗನಾಗಿ ಕಮಲಾಪುರದ ದೊಡ್ಡ ಶಾಲೆಯನ್ನು ಸೇರಿದನು. ಪ್ರತಿ ದಿನವೂ ೨ ಮೈಲಿ ಹೋಗಿ ಬರಬೇಕು. ಆದರೆ ಜೊತೆಗೆ ಇವನ ಹಾಗೆಯೇ ಆ ಶಾಲೆಗೆ ಹೋಗುವ ಇಬ್ಬರು ಹುಡುಗರು ಇದ್ದುದರಿಂದ ಕಷ್ಟ ತೋರ ಲಿಲ್ಲ ಕೋತಿ ಆಟದ ಸಮಾಚಾರವನ್ನು ಎಲ್ಲರೂ ಮರೆತರು ಮುಕುಂ ದನ ಹಣೆಯಲ್ಲಿ ಮಾತ್ರ ದೊಡ್ಡ ಗಾಯದ ಗುರುತಿತ್ತು.

ಮಾರಿಯ ತಾಯಿಯಾದ ಕುಪ್ಪಾಯಿಯ ಮನಸ್ಸಿಗೆ ಶಾಂತಿ ಇರಲಿಲ್ಲ. 'ಹೇಗೆ ಅಯ್ಯನವರ ಮನೆಯಲ್ಲಿ ನೀವು ನುಗ್ಗಿದಿರಿ? ಆ ಪಾಪ ನಮ್ಮನ್ನು ಹಿಡಿದು ತಿನ್ನದಿರುವುದೇ? ಇತರ ಜಾತಿಯ ಹುಡುಗರೊಡನೆ ನೀವೇತಕ್ಕೆ ಕಲೆತು ಆಟವಾಡಿದಿರಿ? ದೈವವು ನಮ್ಮನ್ನು ಬಿಡುವುದೆ? ಆದುದರಿಂದಲೇ

ಈ ಕಷ್ಟಗಳೆಲ್ಲವೂ ನಮಗೆ ಬಂದಿವೆ. ಮಳೆಯೇ ನಿಂತುಹೋಯಿತು. ಉಣ್ಣಲು ಹಿಟ್ಟಿಲ್ಲದೆ ಕಷ್ಟಪಡುತ್ತೇವೆ. ಎಲ್ಲವೂ ಅದರ ಶಾಪವೇ' ಎಂದು ಬಲು ಬಗೆಯಲ್ಲಿ ತನ್ನ ಮಕ್ಕಳನ್ನು ಚುಚ್ಚಿ ಮಾತನಾಡುತ್ತಿರುವಳು. ಊರ ಮಾರಿ ದೇಸಿಗೆ ಮೂರು ಪೊಂಗಲಿಗೂ ತಪ್ಪದೆ ಮೂರು ಕೋಳಿಗಳನ್ನು ಕೊಟ್ಟು 'ತಾಯೇ! ದೈವವೇ! ನನ್ನ ಮಕ್ಕಳು ತಿಳಿಯದೆ ಮಾಡಿಬಿಟ್ಟರು. ಮನ್ನಿಸು' ಎಂದು ಪ್ರಾರ್ಥಿಸಿಕೊಂಡಳು. ಎಷ್ಟು ಭಯಭಕ್ತಿಯಿಂದ ಪೂಜೆ ಮಾಡಿ ಬಲಿ ಕೊಟ್ಟರೂ ಮಾರಿಯಮ್ಮನ ಕೋಪ ಶಾಂತವಾಗಲಿಲ್ಲ. ಕಷ್ಟ ಪರಂಪರೆಗಳು ಬರುತ್ತಲೇ ಇದ್ದವು. ಪೂರ್ವದಲ್ಲಿ ಗಂಡನು ಸಂತೆಯೆಂಬ ನೆವಮಾತ್ರದಿಂದ ಹೆಂಡ ಕುಡಿಯಲಿಕ್ಕೆ ಹೋಗುವುದು ವಾಡಿಕೆ. ಈಗ ಪ್ರತಿ ದಿನವೂ ಹೋಗಲಾರಂಭಿಸಿದನು. ಕುಡಿದು ಸ್ಮರಣೆಯಿಲ್ಲದೆ ಮನೆ ಸೇರಿ ತಿನ್ನ ಲಿಕ್ಕೆ ಹಾಕೆಂದು ಗದರಿಸುವುದೂ 'ತಿಂಡಿ ಯಾವುದು? ಎಲ್ಲವೂ ಹೆಂಡಕ್ಕೆ ಹಾಳುಮಾಡಿರುವಿರಿ' ಎಂದರೆ ಒದೆಯುವುದೂ ಹೊಡೆಯುವುದೂ ಅವನಿಗೆ ಅಭ್ಯಾಸವಾಯಿತು. ಹಗಲೆಲ್ಲ ಕಾಡಿಗೆ ಹೋಗಿ ತಿರುಗಿ ಒಂದು ತಲೆಹೊರೆ ಸೌದೆಯನ್ನು ಹೊತ್ತುಕೊಂಡು ಬಂದು ಮಾರಿ ಸಂಪಾದಿಸಿದ ಒಂದು ಪಾವಲಿಯನ್ನು ಕೂಡ ಅವನು ಜಗಳವಾಡಿ ಕಿತ್ತುಕೊಂಡು ಹೆಂಡದ ಅಂಗ ಡಿಗೆ ತೆಗೆದುಕೊಂಡು ಹೋಗುವನು. ಹೀಗೆ ಅವಳ ಬಾಳು ಕಷ್ಟವಾದ ಹಾಗೆಲ್ಲ 'ಬ್ರಾಹ್ಮಣರ ಮನೆಯೊಳಕ್ಕೆ ಹೋದುದಕ್ಕೆ ಶಾಪವಿದು' ಎಂದು ತನ್ನ ಮಕ್ಕಳನ್ನು ಕುರಿತು ಹೇಳುವಳು. ಗಂಡನು ಕುಡಿದು ಬಂದು ಹೊಡೆದರೆ ಏಟುಗಳನ್ನು ಹೊಡಿಸಿಕೊಳ್ಳುತ್ತ 'ಮಕ್ಕಳೇ ಅಳಬೇಡಿರಿ. ನಾವು ಕಂಡಿಗೆ (ಲಂಕಾದ್ವೀಪದಲ್ಲಿ ಒಂದು ಪಟ್ಟಣ) ಹೋಗಿಬಿಡೋಣ. ಈ ಹಾಳಾದ ಊರು ಮನೆ ನಮಗೆ ಬೇಡ. ಇವನು ಹೆಂಡದಂಗಡಿಯ ಲ್ಲಿಯೇ ಸಾಯಲಿ' ಎನ್ನುವಳು.

ಆ ವರ್ಷ ಶುದ್ಧಾಂಗ ಮಳೆ ಆಗಲಿಲ್ಲ. ಭೂಮಿಯೆಲ್ಲ ಬೆಂಗಾಡಾಗಿತ್ತು. ಕೂಲಿಗೆ ಕರೆಯುವವರು ಯಾರೂ ಇಲ್ಲ. ಬಡ ರೈತರ ಪಾಡು ಬಲು ಕಷ್ಟ ವಾಗಿತ್ತು. ಕೂಲಿ ಕೆಲಸ ಮಾಡಿ ಜೀವಿಸುವವರ ಬಾಳಂತೂ ಕಡು ಕಷ್ಟ. ಹೊಲೆಮಾದಿಗರ ವಿಚಾರವಾಗಿ ಹೇಳಬೇಕೆ? ಅವರ ಸ್ಥಿತಿಯನ್ನು ಬರೆದು ತಿಳಿ ಸಲು ಸಾಧ್ಯವೇ? ಕಂಡಿಗೆ ಆಳುಗಳನ್ನು ಒಯ್ಯಲು ಕಂಗಾಣಿ ಬಂದನು.

ಜನರು ಅವನನ್ನೇ ದೈವವೆಂದು ಎಣಿಸಿ ಎದುರುಗೊಂಡರು. 'ಕಂಗಾಣಿ ಬಂದು ಬಡವರನ್ನು ಮೋಸ ಮಾಡಿ ಕರೆದುಕೊಂಡು ಹೋಗುತ್ತಾನೆ. ಸುಳ್ಳು ಪಳ್ಳು ಹೇಳಿ ತಿಳಿಯದವರನ್ನು ತೆಗೆದೊಯ್ಯುತ್ತಾನೆ. ಈ ಅನ್ಯಾಯವನ್ನು ಕೇಳುವವರಿಲ್ಲ' ಎಂದು ದೊಡ್ಡ ಪುಣ್ಯವಂತರಾದ ರೈತರು ಹೇಳಿದರು. ಆದರೆ 'ನಾವು ಈಗ ಅನುಭವಿಸುವ ಕಷ್ಟಕ್ಕಿಂತಲೂ ಏನು ಕಷ್ಟ ಇದ್ದೀತು?' ಎಂಪೆಣಿಸಿ ಅನೇಕರು ಕಂಗಾಣಿಯನ್ನು ಹಿಂಬಾಲಿಸಿ ಲಂಕೆಯನ್ನು ಸೇರಿದರು.

ಕುಪ್ಪಾಯಿಯು ತನಗೆ ಇದೇ ವಿಮೋಚನೆಯೆಂದೆಣಿಸಿ ಮಕ್ಕಳೊಂದಿಗೆ ಕಂಡಿಗೆ ಹೋಗಲು ಹೆಸರು ಕೊಟ್ಟಳು. ಗಂಡನು ಬರಲಾರನೆಂದನು. ಅವನು ಎಲ್ಲಾದರೂ ಹೋಗಲೆಂದು ಅವನನ್ನು ಊರಲ್ಲೇ ಬಿಟ್ಟು ಹೋಗ ಬೇಕೆಂದು ಮೊದಲು ತೀರ್ಮಾನ ಮಾಡಿದಳು. ಆದರೆ ಕೊನೆಯಲ್ಲಿ ಅವನು 'ನನಗೆ ಹಿಟ್ಟು ಬೇಯಿಸಿ ಹಾಕುವವರು ಯಾರು? ನಾನೂ ಬರುತ್ತೇನೆ' ಎಂದನು. ಅಲ್ಲದೆ ಹೆಂಡ ಸಾರಾಯಿ ಮುಟ್ಟುವದಿಲ್ಲವೆಂದು ಆಣೆಯಿಟ್ಟು, ತನ್ನನ್ನು ಕರೆದುಕೊಂಡು ಹೋಗಬೇಕೆಂದು ಬಹು ದೈನ್ಯದಿಂದ ಬೇಡಿ ಕೊಂಡನು. ಕೊನೆಯಲ್ಲಿ ಎಲ್ಲರೂ ಕಲೆತು ಊರನ್ನು ಬಿಟ್ಟು ಹೋದರು.

೪

ಇನ್ನು ಮೂರು ವರ್ಷವಾಯಿತು. ಮುಕುಂದನು ಶಾಲೆಯಲ್ಲಿ ಚೆನ್ನಾಗಿ ಓದುತ್ತಿದ್ದನು. ಕೊನೆಯ ಪರೀಕ್ಷೆಯಲ್ಲಿ ಮೊದಲನೆಯವನಾಗಿ ತೇರ್ಗಡೆ ಹೊಂದಿದನು. ಈ ವಿಷಯವನ್ನು ಶಾಲೆಯಲ್ಲಿ ಬೆಳಿಗ್ಗೆ ಪ್ರಕಟಿಸಿ ದರು. ಮುಕುಂದನು ಕೂಡಲೆ ತಾಯಿಯೊಡನೆ ಈ ಸಂತೋಷ ಸಮಾ ಚಾರವನ್ನು ಹೇಳಲು ಬಹು ಆತುರನಾದನು. ಆದರೆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಸಹಪಾಠಿಗಳು ಎಲ್ಲರೂ ಕೂಡಿ ದೇವರ ಬೆಟ್ಟವನ್ನೇರಿ ಅಲ್ಲಿ ಜಾತ್ರೆಯನ್ನು ನೋಡಿಕೊಂಡು ತಮಾಷೆಯಾಗಿ ಸ್ವಲ್ಪ ಕಾಲ ಕಳೆದು ಬರಬೇಕೆಂದು ತೀರ್ಮಾನಿಸಿ ಮುಕುಂದನನ್ನೂ ಕರೆದರು. ಒಲ್ಲೆನೆಂದು ಅವನು ಹೇಳಿ ನೋಡಿದನು. 'ಹೋದರೆ ಹೊತ್ತಾಗುತ್ತದೆ. ಮನೆಯಲ್ಲಿ ತಾಯಿಯು ಕಾದಿರುವಳು' ಎಂದನು.

'ಹೋಗೋ, ಹೆಣ್ಣು ಕೂಸಿನಂತೆ ಮಾತನಾಡುತ್ತೀಯೆ. ಹೊತ್ತಾದರೆ ನಾನೂ ನಿನ್ನ ಜೊತೆಗೆ ಊರಿಗೆ ಬರುತ್ತೇನೆ. ನೀನು ಭಯಪಡಬೇಡ.

ಪರೀಕ್ಷೆಯಲ್ಲಿ ಮೊದಲನೆಯವನಾದೆನೆಂದು ಗರ್ವಿಸಬೇಡ. ನಮ್ಮ ಜೊತೆಗೆ ಖಂಡಿತವಾಗಿ ಬರಲೇಬೇಕು.' ಎಂದು ಒಬ್ಬ ಧಾಂಡಿಗ ಹೇಳಿದನು.

ಸುತ್ತುಮುತ್ತಲಿದ್ದ ಹುಡುಗರೆಲ್ಲರೂ 'ಬಂದೇ ತೀರಬೇಕು-ಬಂದೇ ತೀರಬೇಕು. ಬಿಡಕೂಡದು' ಎಂದರು.

ಆದುದರಿಂದ ಮುಕುಂದನು ಬೆಟ್ಟಕ್ಕೆ ಹೋಗಬೇಕಾಯಿತು. ಬೆಟ್ಟದ ಮೇಲೆ ತಮಾಷೆಯಾಗಿಯೇ ಇದ್ದಿತು. ಉತ್ಸವಕ್ಕೆ ತಂಡತಂಡವಾಗಿ ಜನಗಳು ಬಂದಿದ್ದರು. ಹುಡುಗರು ಗುಡಿಯೊಳಕ್ಕೂ ಹೊರಕ್ಕೂ ಅಂಗಡಿ ಬೀದಿಯಲ್ಲಿಯೂ ಮನಸ್ವಿಯಾಗಿ ತಿರುಗಾಡಿದರು. ಅವರಲ್ಲಿ ಒಬ್ಬ ಹುಡುಗನು ಭಾಗ್ಯವಂತರ ಮನೆಯಲ್ಲಿ ಬೆಳೆದ ಮುಮುತೆಯ ಮಗು. ಅವನ ತಂದೆಯು ಐದು ರೂಪಾಯಿ ನೋಟನ್ನು ಅವನ ಇಷ್ಟ ಬಂದಂತೆ ಖರ್ಚು ಮಾಡುವುದಕ್ಕೆಂದು ಕೊಟ್ಟಿದ್ದನು. ಇದನ್ನು ತೆಗೆದುಕೊಂಡು ಮಿಠಾಯಿ ಅಂಗಡಿಯಲ್ಲಿ ಬೇಕಾದ ತಿಂಡಿಯನ್ನು ಕೊಂಡು ಎಲ್ಲರೂ ತಿಂದರು. ಬಿಸಿಲಿನಲ್ಲಿ ದಿನವೆಲ್ಲ ಬಿಡುವಿಲ್ಲದೆ ತಿರುಗಿ ಬೆಟ್ಟದಿಂದ ಇಳಿದರು. ಇಳಿಯುವಾಗ ಮುಕುಂದ 'ಎಲೋ ರಾಮಕೃಷ್ಣ, ಬಹು ಬಾಯಾರಿಕೆಯಾಗುತ್ತದೆಯೋ' ಎಂದನು. 'ಇಲ್ಲೆಲ್ಲಿ ನೀರು? ಊರು ಸೇರಿದರೇನೆ' ಎಂದರು ಇತರರು.

'ಹೊಗಿರೋ ಮಡ್ಡಿಗಳಿರಾ, ಇಲ್ಲಿ ಹನುಮಂತನ ಕುಂಟೆಯಿರುವುದು ಗೊತ್ತಿಲ್ಲವೇ?' ಎಂದು ಧಾಂಡಿಗ ಹೇಳಿ ಒಂದು ಕಾಲುದಾರಿಯಲ್ಲಿ ಹೋಗಿ ಆಂಜನೇಯ ದೇವರನ್ನು ಕೆತ್ತಿದ್ದ ಬಂಡೆಯ ಹಿಂದೆ ಒಂದು ಕುಂಟೆಯನ್ನು ತೋರಿಸಿದನು. ಮುಕುಂದನು ಅದರಲ್ಲಿ ಇಳಿದು ದಣಿಯುವಷ್ಟು ನೀರು ಕುಡಿದನು. "ಎಷ್ಟು ಚೆನ್ನಾಗಿದೆಯೋ ನೀರು" ಎಂದು ಹೇಳುತ್ತ ಮೇಲಕ್ಕೆ ಬಂದನು. ಬಹು ಬಾಯಾರಿಕೆಯಿದ್ದರೆ ಕೊಳೆ ನೀರು ಕೂಡ ಬಹು ರುಚಿಯಾಗಿರುವುದಿಲ್ಲವೇ?

ಕಮಲಾಪುರಕ್ಕೆ ಹೋಗಿ ಸೇರಿದ ಕೂಡಲೇ ಕತ್ತಲಾಯಿತು. ಆಮೇಲೆ ಮುಕುಂದನು ವೇಲಂಪಟ್ಟಿಗೆ ಹೋಗಿ ಮನೆ ಸೇರಿ 'ಅಮ್ಮಾ' ಎಂದು ಬಾಗಿಲು ತಟ್ಟುವ ವೇಳೆಗೆ ಬಹಳ ಹೊತ್ತಾಗಿತ್ತು.

'ಅಪ್ಪಾ, ಮುಕುಂದಾ, ಬಂದೆಯಾ? ಏತಕ್ಕೆ ಇಷ್ಟು ಹೊತ್ತು?

ನಾನು ಭಯಪಟ್ಟೆ; ಮಗು, ಪರೀಕ್ಷೆಯ ಸಮಾಚಾರ ತಿಳಿದಕೂಡಲೆ ತಿರುಗಿ ಬರುತ್ತೇನೆಂದು ಹೇಳಿದೆಯಲ್ಲ' ಎಂದಳು ತಾಯಿ.

'ದೇವರ ಬೆಟ್ಟಕ್ಕೆ ಎಲ್ಲರೂ ಹೋಗಿದ್ದೆವು. ನಾನು ಬರಲಾರೆನೆಂದೆನು. ಹುಡುಗರು ಬಿಡಲಿಲ್ಲ. ಹೋಗಿಬರುವುದಕ್ಕೆ ಇಷ್ಟು ಹೊತ್ತಾಯಿತು. ಉತ್ಸವದ ತಮಾಷೆಯನ್ನೆಲ್ಲ ನೋಡಿದೆವು' ಎಂದು ಮುಕುಂದನು ಹೇಳಿದನು.

'ಒಳ್ಳೆಯದು. ಹೇಗಾದರೂ ಬಂದು ಸೇರಿದೆಯಲ್ಲ, ಅಷ್ಟೇ ಸಾಕು. ಇರಲಿ. ಪರೀಕ್ಷೆ ಏನಾಯಿತು! ಮಗು.' ಎಂದು ತಾಯಿ ಕೇಳಿದಳು.

'ಅಮ್ಮಾ, ನಾನು ಮೊದಲನೆಯವನಾಗಿ ತೇರ್ಗಡೆ ಹೊಂದಿದೆನು' ಎಂದನು.

'ಅಯ್ಯೋ—ನನ್ನ ಮುದ್ದು ಕಂದ' ಎಂದು ಸೀತಮ್ಮನು ಮಗನನ್ನು ಅಪ್ಪಿಕೊಂಡು ಅತ್ತಳು.

ಅವಳೇತಕ್ಕೆ ಅಳಬೇಕು ? ಅವಳ ಮನಸ್ಸಿನಲ್ಲಿ ಆಗ ಏನೇನು ಭಾವನೆಗಳು ಉದಯಿಸಿದವು ? ಇವೆಲ್ಲವು ಗಂಡನನ್ನು ಕಳೆದುಕೊಂಡು ಹೆತ್ತ ಮಗನೊಬ್ಬನ ಮೇಲೆ ಆಶೆಯನ್ನಿಟ್ಟು ಬೆಳೆಸಿದ ತಾಯಿಗೇ ಗೊತ್ತು. ನಾನು ಬರೆಯಲು ಸಾಧ್ಯವೇ ?

೫

ಮುಕುಂದನ ತಾಯಿಯು ಈ ರೀತಿ ಆನಂದಸಾಗರದಲ್ಲಿ ಮುಳುಗಿದ ನಾಲ್ಕು ದಿನಗಳಲ್ಲಿಯೇ ಮನೆ ಹಾಳಾಯಿತು. ಅಯ್ಯೋ ಲೋಕವೇ ! ಕತೆಯನ್ನು ಸಂಕ್ಷೇಪವಾಗಿ ಹೇಳಿ ಮುಗಿಸುತ್ತೇನೆ. ದೇವರ ಬೆಟ್ಟದಲ್ಲಿ ಜೊತೆಯವರೊಡನೆ ಆಟವಾಡಿ ಮನೆಗೆ ತಿರುಗಿ ಬಂದ ರಾತ್ರಿಯೇ ಮುಕುಂದನಿಗೆ ಹೊಟ್ಟೆನೋವು ಬಂತು. ಅನಂತರ ಭೇದಿಯಾಯಿತು. ರಾತ್ರಿಯೊಳಗೆ ಹತ್ತುಸಲವಾಯಿತು. ಆದರೆ ಯಾರೂ ವಿಷಭೇದಿ ಎಂದು ನೆನಸಲಿಲ್ಲ. ಏನೋ ದೇವರ ಬೆಟ್ಟದಲ್ಲಿ ಅಂಗಡಿಯಲ್ಲಿ ತಿಂಡಿ ತೆಗೆದುಕೊಂಡು ತಿಂದುದರಿಂದ ಅಜೀರ್ಣವಾಯಿತೆಂದು ಎಣಿಸಿದರು. ಹುಡುಗನು ಬಹು ಕಷ್ಟಪಟ್ಟನು. ಆ ಹಳ್ಳಿಯಲ್ಲಿ ರೋಗ ಬಂದರೆ ವೈದ್ಯನೇ, ಔಷಧವೇ, ಒಂದೂ

ಇಲ್ಲ. ಅದರಲ್ಲಿಯೂ ಬಡವರ ಮನೆಯಲ್ಲಿ ಕಾಲರಾ ಅಥವಾ ಬೇರೆ ದೊಡ್ಡ ರೋಗವನ್ನು ನಿಲ್ಲಿಸಲಿಕ್ಕೂ ಚಿಕಿತ್ಸೆಮಾಡಲಿಕ್ಕೂ ಯಾರಿಗೂ ತಿಳಿಯದು. ತಿಳಿದರೂ ಅನುಕೂಲಗಳಿಲ್ಲ. ಖರ್ಚಿಗೆ ದುಡ್ಡೆಲ್ಲಿ? ಹೀಗೆ ಮಾಡಬೇಕು ಎಂದು ತಿಳಿದವರು ಹೇಳುವರು, ಪುಸ್ತಕದಲ್ಲಿ ಬರೆದಿರುವರು. ಅವುಗಳಲ್ಲಿ ಯಾವುದನ್ನೂ ದಿಕ್ಕಿಲ್ಲದ ಬಡವರ ಮನೆಗಳಲ್ಲಿ ನಡೆಸುವುದಕ್ಕಾಗುವುದಿಲ್ಲ.

ದೇವರದಯೆಯಿಂದ ಹುಡುಗ ತಪ್ಪಿಸಿಕೊಂಡನು. ಅಕ್ಕಪಕ್ಕದ ಮನೆಯವರು ಕೆಲವರು ಕನಿಕರ ತಾಳಿ ಸಹಾಯ ಮಾಡಿದರು. ಹುಡುಗ ಉಳಿದರೂ ತಾಯಿಯನ್ನು ಆ ವಿಷರೋಗವು ಹಿಡಿಯಿತು. ಎರಡು ದಿನ ಯಾರಿಗೂ ಹೇಳದೆ ತನ್ನ ಯಾತನೆಯನ್ನು ಮುಚ್ಚಿಟ್ಟುಕೊಂಡು ಹುಡುಗನಿಗೆ ಬೇಕಾದ ಉಪಚಾರವನ್ನೆಲ್ಲ ಮಾಡುತ್ತಿದ್ದಳು. ಕೊನೆಯಲ್ಲಿ ಸಹಿಸಲಿಕ್ಕಾಗದೆ ಮಲಗಿಬಿಟ್ಟಳು. ಅನಂತರ ಏನು ಮಾಡಿ ಸಾಧ್ಯ? 'ಅಯ್ಯೋ ನನ್ನ ಮಗು ವಿಗೆ ಗುಣವಾಯಿತೆ? ಅವನನ್ನು ಯಾರು ನೋಡಿಕೊಳ್ಳುವರು? ನಾನು ಸಾಯುತ್ತೇನೆಯೋ?' ಎಂದು ಎದ್ದು ಕುಳಿತುಕೊಂಡು ಕನಲಿ ಮತ್ತೆ ಕೆಳಕ್ಕೆ ಪ್ರಜ್ಞೆ ತಪ್ಪಿದವಳಾಗಿ ಬಿದ್ದಳು. ಆದಾದ ಮೇಲೆ ಎಚ್ಚರವಾಗಲಿಲ್ಲ, ಕೈಕಾಲುಗಳಲ್ಲಿ ಸ್ವಲ್ಪ ಸೆಳವು ಬಂದು ಪ್ರಾಣ ಹೋಯಿತು.

೬

ಇನ್ನು ಹದಿನೈದು ವರ್ಷವಾಯಿತು. ಎಲ್ಲವೂ ಸಂಪೂರ್ಣವಾಗಿ ಬದಲಾಯಿಸಿತು. ವೇಲಂಪಟ್ಟಿ ಬ್ರಾಹ್ಮಣರ ಬೀದಿಯಲ್ಲಿ ಮನೆಗಳೆಲ್ಲ ಹಾಳಾದವು. ದೇವರ ಪೂಜೆ ಮಾಡುವ ಕೃಷ್ಣಭಟ್ಟರು ಮಾತ್ರ ತಮ್ಮ ಮನೆಯಲ್ಲಿ ಒಕ್ಕಲಿದ್ದರು. ಇತರರೆಲ್ಲರೂ ಜೀವನೋಪಾಯವನ್ನು ಹುಡುಕುತ್ತ ಊರನ್ನು ಬಿಟ್ಟು ದೊಡ್ಡ ಪಟ್ಟಣಗಳ ಎಲ್ಲೆಗಳಿಗೆ ಹೋದರು. ವೇಲಂಪಟ್ಟಿಯ ಹೊಲಗೇರಿಯೂ ಅರ್ಧ ಹಾಳಾಗಿತ್ತು. ಕೆಲವರು ಕಂಡಿಗೂ ಕೆಲವರು ಪಿನಾಂಗಿಗೂ ಕೆಲವರು ಶೇರ್ವರಾಯ್ ಬೆಟ್ಟಕ್ಕೂ ಕೆಲವರು ಕೋಲಾರದ ಗಣಿಗೂ, ಬೆಂಗಳೂರಿಗೂ ಮತ್ತು ಇತರ ಸ್ಥಳಗಳಿಗೂ ಕೂಲಿ ಕೆಲಸ ಹುಡುಕುತ್ತ ಹೋದರು. ಒಕ್ಕಲಿಗರ ಬೀದಿ ಮಾತ್ರ ಅಷ್ಟು ಹಾಳಾ

ಗಿರಲಿಲ್ಲ. ಹೊಲ ದನಗಳನ್ನು ಬಿಟ್ಟು ಹೋಗಲು ದಾರಿಯಿಲ್ಲದೆ ಅವರು ಇದ್ದ ಸ್ಥಳದಲ್ಲಿಯೇ ಕಷ್ಟಪಟ್ಟುಕೊಂಡು ನಿಂತರು.

ತಾಯಿಯೊಡನೆ ಲಂಕೆಗೆ ಹೋದ ಮಾರಿಯೂ ಚಿನ್ನನೂ ಅಲ್ಲಿಯೇ ಇರುತ್ತಿದ್ದರು. ತಂದೆಯು ತೋಟವನ್ನು ಸೇರಿದ ಕೂಡಲೆ ಮೊದಲಿನಂತೆ ಹೆಂಡದ ಅಂಗಡಿಗೆ ಹೋಗಲಾರಂಭಿಸಿದನು. ಕೆಲಸವನ್ನೂ ಸರಿಯಾಗಿ ಮಾಡುತ್ತಿರಲಿಲ್ಲ. ಸೋಮಾರಿ, ಕುಡುಕನೆಂದು ಅವನನ್ನು ಸ್ವಲ್ಪ ದಿನಗಳಲ್ಲಿಯೇ ಓಡಿಸಿಬಿಟ್ಟರು. ಮತ್ತೆ ಬೇರೆ ತೋಟಕ್ಕೆ ಹೋದನು. ಅಲ್ಲಿಯೂ ಇದೇ ಗತಿಯೇ. ಸಿಕ್ಕಿದ ಕಡೆ ಅಲೆದು ತಿರುಪವೆತ್ತಿ ಸ್ವಲ್ಪ ಕಾಲ ಜೀವಿಸುತ್ತಿದ್ದನು. ಕೊನೆಯಲ್ಲಿ ಇಂತಹ ಸ್ಥಳಕ್ಕೆ ಹೋದನೆಂದೇ ತಿಳಿಯಲಿಲ್ಲ.

ಮಾರಿಯೂ ಚಿನ್ನನೂ ಚಹಾ ತೋಟದಲ್ಲಿ ಕೆಲಸ ಮಾಡಿಕೊಂಡು ತಾಯಿಯೊಡನೆ ಚೆನ್ನಾಗಿ ಬಾಳುತ್ತ ಬಂದರು. ಮಾರಿಗೆ ಈಗ ಇಪ್ಪತ್ತೈದು ವರ್ಷ. ಅದೇ ತೋಟದಲ್ಲಿ ಒಬ್ಬ ಹುಡುಗಿಯು ಇದ್ದಳು. 'ನಿನಗೆ ಇವಳಿಗಿಂತಲೂ ಉತ್ತಮಳು ಊರಲ್ಲಿ ಎಲ್ಲಿ ಸಿಗುವಳು. ಇವಳನ್ನು ಮದುವೆಯಾಗು' ಎಂದು ಕುಪ್ಪಾಯಿಯು ಹೇಳಲಾಗಿ ಮಾರಿಯು ಒಡಂಬಟ್ಟನು. ಮದುವೆಯಾದ ಸ್ವಲ್ಪ ದಿನಗಳಲ್ಲಿಯೇ ಊರಿಗೆ ತಿರುಗಿ ಹೋಗಿ ಜೀವಿಸೋಣವೆಂದು ಮಾರಿ ಯೋಚಿಸಿದನು.

'ಅಮ್ಮಾ! ಈ ನಾಡಿನಲ್ಲಿ ನಾವು ಹದಿನೈದು ವರ್ಷ ಜೀವನ ಮಾಡಿ ಆಯಿತು. ತಂದೆಯು ಹೋದವನು ತಿರುಗಿ ಬರಲೇ ಇಲ್ಲ. ಅವನಿಗಾಗಿ ಕಾದು ಫಲವಿಲ್ಲ. ನಾವು ಇನ್ನೇತಕ್ಕೆ ನಮ್ಮೂರಿಗೆ ಹೋಗಬಾರದು ? ನಮಗೇನು ಈಗ ಕಡಿಮೆ. ನಮ್ಮ ಹಣ ಸುಮಾರು ೨೦೦ ರೂಪಾಯಿ ಕಂಗಾಣಿಯ ಕೈಯಲ್ಲಿದೆ. ಅದನ್ನು ತೆಗೆದುಕೊಂಡು ವೇಲಂಪಟ್ಟಿಗೆ ತಿರುಗಿ ಹೋಗಿ ಒಂದು ಗಾಡಿಯನ್ನೂ ಒಂದು ಜತೆ ಎತ್ತನ್ನೂ ಇಟ್ಟುಕೊಂಡು ಗೌರವವಾಗಿ ಜೀವಿಸಬಹುದು. ಅಮ್ಮಾ! ನನಗೆ ಈ ಊರು ಸರಿಹೋಗಲಿಲ್ಲ. ದೊಡ್ಡಿಯಲ್ಲಿ ಕಟ್ಟಿಟ್ಟ ದನಗಳಂತೆ ನಮ್ಮ ಬಾಳಾಗಿದೆ. ಒಬ್ಬನು ಕೈಹಿಡಿದ ಹೆಂಡತಿಯೇ ತನ್ನವಳಲ್ಲ. ಇಲ್ಲಿ ಏತಕ್ಕೆ ಅಮ್ಮಾ ಇನ್ನೂ ನಾವಿರಬೇಕು.' ಎಂದು ತಾಯಿಯೊಡನೆ ಹೇಳಿದನು.

'ಹೌದಪ್ಪಾ, ವೇಲಂಪಟ್ಟಿಗೇ ಹೋಗಿ ಅಲ್ಲಿ ನಿಮ್ಮ ತಂದೆಯ ಗುಡಿಸಲಿನಲ್ಲಿ ಸಾಯಬೇಕೆಂದೇ ನನಗೂ ಆಶೆ' ಎಂದಳು ಕುಪ್ಪಾಯಿ.

ಹಾಗೆಯೇ ವೇಲಂಪಟ್ಟಿಗೆ ತಿರುಗಿ ಹೋಗಿ ಸೇರಿದರು. ಮಾರಿಯೂ ಚಿನ್ನನೂ ಮೆಜ್ಜೇರಿ ಸಂತೆಗೆ ಹೋಗಿ ಒಂದು ಜೊತೆ ಸೊಗಸಾದ ಎತ್ತುಗಳನ್ನೂ ಸಾಲದಲ್ಲಿ ಒಂದು ಗಾಡಿಯನ್ನೂ ಕೊಂಡು ಬಂದರು. ಅವುಗಳನ್ನು ಕೊಂಡು ಸ್ವಲ್ಪಕಾಲ ಮಾರಿಯು ಬಹು ಸಂತೋಷವಾಗಿ ಜೀವಿಸಿದನು. ರೈತರ ಬೀದಿಯಲ್ಲಿ 'ನೋಡಿದೆಯಾ? ಕಂಡಿ ಹೊಲೆಯನು ಎತ್ತು ಗಾಡಿಗಳೊಡನೆ ಕೊಬ್ಬಿರುತ್ತಾನೆ' ಎಂದು ಹೊಟ್ಟೆಕಿಚ್ಚುಪಟ್ಟರು.

ಆದರೆ ದೀರ್ಘಕಾಲ ಹೀಗೆ ನಡೆಯಲಿಲ್ಲ. ಕಷ್ಟಕಾಲವು ಬೇಗನೆ ಬಂದಿತು. ಎತ್ತುಗಳಲ್ಲೊಂದು ಇದ್ದಕ್ಕಿದ್ದ ಹಾಗೆ ಕುಂಟಲಾರಂಭಿಸಿತು. ಇಂತಹ ಕಾರಣವೆಂದು ತಿಳಿಯಲಿಲ್ಲ ಏನು ಮಾಡಿದರೂ ಕಾಲು ಸರಿಯಾಗಲಿಲ್ಲ. ಕೊಂಡಲಾಂಪಟ್ಟಿಯಲ್ಲಿ ಒಬ್ಬ ಪಶುವೈದ್ಯನಿಗೆ ಐದು ರೂಪಾಯಿ ಕೊಟ್ಟು ಕಾಲಿಗೆ ಮದ್ದಿಟ್ಟು ಕಟ್ಟಿ ನೋಡಿದನು. ಅನಂತರ ಮಂತ್ರ ಹಾಕಿಸಿದನು. ಕೊನೆಯಲ್ಲಿ ಬರೆ ಹಾಕಿಸಿ ನೋಡಿದನು. ಆ ಎತ್ತಿಗಾಗಿ ಹಾಕಿದ ಹಣ ವ್ಯರ್ಥವಾಯಿತು. ಗಾಡಿಯನ್ನು ಅಡವಿಟ್ಟು ಗೌಡನೊಬ್ಬನಲ್ಲಿ ನಲವತ್ತು ರೂಪಾಯಿ ಸಾಲ ತೆಗೆದು ಕೈಲಿದ್ದ ಹಣವನ್ನು ಸೇರಿಸಿ ಬೇರೊಂದು ಎತ್ತನ್ನು ಕೊಂಡನು. ಹೀಗೆ ಸ್ವಲ್ಪ ಕಾಲ ನಡೆಯಿತು.

ಅಕಸ್ಮಾತ್ತಾಗಿ ನೆರೆಹೊರೆ ಗ್ರಾಮಗಳಲ್ಲಿ ಪಶುವ್ಯಾಧಿ ಸಾಂಕ್ರಾಮಿಕವಾಗಿ ಹಬ್ಬಿತು. ಅನೇಕ ದನಗಳು ಸತ್ತವು. ಮಾರಿಯ ಹೊಸ ಎತ್ತೂ ಈ ವ್ಯಾಧಿಗೆ ಗುರಿಯಾಗಿ ಒಂದೇ ದಿನದಲ್ಲಿ ಸತ್ತಿತು. ಅನಂತರ ಈ ಸಂಸಾರಕ್ಕೆ ಬಂದ ಕಷ್ಟವನ್ನು ಬರೆಯಬೇಕೆ?

ಕೊನೆಯಲ್ಲಿ ಒಬ್ಬ ರೈತನ ತೋಟದಲ್ಲಿ ಅಣ್ಣನೂ ತಮ್ಮನೂ ಕೆಲಸಕ್ಕೆ ಕುದಿರಿಕೊಂಡರು. ಯಜಮಾನನು ರಾತ್ರಿ ಹಗಲು ಕೆಲಸ ತೆಗೆದನು. ಆದರೆ ಕೂಲಿ ಬಹಳ ಸ್ವಲ್ಪ. ಎಲ್ಲರೂ ಅರ್ಧ ಹೊಟ್ಟೆ ಉಂಡರೂ ತಾಯಿಯನ್ನು ಸಂರಕ್ಷಿಸುವುದು ಕಷ್ಟವಾಗಿತ್ತು. ಸಾಲದುದಕ್ಕೆ ತಮ್ಮನಾದ ಚಿನ್ನನು ಜಗಳ ಪಾಡುವುದಕ್ಕೆ ಮೊದಲಿಟ್ಟನು. ಹೀಗಿರಲು ಪಿನಾಂಗಿಗೆ ಆಳುಗಳನ್ನು ಸೇರಿ

ಸಲು ಒಬ್ಬ ಕಂಗಾಣಿ ಬಂದನು. ಚಿನ್ನನು ಅಣ್ಣನಿಗೆ ಹೇಳದೆ ಅವನ ಹಿಂದೆ ನಡೆದುಬಿಟ್ಟನು. ನಾಗಪಟ್ಟಣಕ್ಕೆ ಹೋದ ಮೇಲೆ ಅಣ್ಣನಿಗೆ ಒಂದು ಕಾಗದ ಬರೆಸಿ ಹಾಕಿದನು. ತಾನು ಹೇಳದೆ ಬಂದುದು ದೊಡ್ಡ ತಪ್ಪೆಂದೂ ಅದಕ್ಕಾಗಿ ಕ್ಷಮಿಸಬೇಕೆಂದೂ ಕ್ಷಾಮವನ್ನು ಸಹಿಸಲಾಗದೆ ಹೇಗಾದರೂ ಬೇರೆ ಜೀವನೋಪಾಯವನ್ನು ಹುಡುಕುವದಕ್ಕಾಗಿ ಓಡಿಬಂದೆನೆಂದೂ ಅಣ್ಣ, ಅತ್ತಿಗೆ, ತಾಯಿ ಇವರ ಪಾದಾರವಿಂದಗಳಿಗೆ ನಮಸ್ಕಾರ ಎಂದೂ ಕಾಗದದಲ್ಲಿ ಬರೆದಿತ್ತು. ಆದರೆ ಈ ರೀತಿಯ ಒಕ್ಕಣಿಕೆಯೆಲ್ಲವು ಚಿನ್ನನಿಗೆ ಬರೆಯಲು ತಿಳಿಯುವುದೇ ? ಬರೆದು ಕೊಟ್ಟವನ ಕೈ ಚಮತ್ಕಾರ. ಆದರೆ ಅಣ್ಣನಿಗೆ ಮರ್‍ಯಾದೆಯಿಂದ ಕಾಗದ ಬರೆಯಲು ಹೇಳಿ ಅದಕ್ಕಾಗಿ ಎರಡಾಣೆ ಬರೆಯುವ ಕೂಲಿ ಕೊಟ್ಟುದು ದೊಡ್ಡ ಅಭಿಮಾನದ ಮಾತೇ ಅಲ್ಲವೇ ? ಓದುಬರಹ ಬಾರದ ಬಡವನಾದವನು ಅದಕ್ಕಿಂತಲೂ ಹೆಚ್ಚಿಗೆ ಏನು ಮಾಡಲಾದೀತು ?

ಮುದುಕಿ ಕುಪ್ಪಾಯಿ, ಪಾಪ, ಹೆಚ್ಚಾಗಿ ನರಳಲು ಮೊದಲಿಟ್ಟಳು. 'ಅಯ್ಯೋ ಇದೆಲ್ಲವು ಮಕ್ಕಳಾಗಿದ್ದಾಗ ಆ ಬ್ರಾಹ್ಮಣರ ಮನೆ ಹೊಕ್ಕಿರಲ್ಲ— ಅದರ ಶಾಪವೇ ಅಪ್ಪಾ. ಅದು ಇನ್ನೂ ಬಿಡಲಿಲ್ಲವೇ. ಮಾರಿಯಮ್ಮ ! ನಿನ್ನ ಮನಸ್ಸು ಎಂದು ಕರಗುವುದು ? ಆ ಪಾಪವು ಎಂದು ತೊಲಗುವುದು ! ಕೈಯಲ್ಲಿ ಕಾಸಿಲ್ಲವಲ್ಲ. ಇದ್ದರೆ ಬರುವ ಹಬ್ಬಕ್ಕೆ ಒಂದು ಕೋಳಿಯನ್ನಾದರೂ ಕೊಡುವೆನೇ ! ವೇಲಂಪಟ್ಟಿ ಮಾತೆಯೇ, ನಾನಾದರು ಬೇಗ ಸತ್ತರೆ ನನ್ನ ಕಷ್ಟ ತೀರುವುದು. ನನ್ನ ಅಜ್ಞಾನದ ಮಗುವನ್ನು ಕಾಪಾಡು. ಅವನೂ ಅವನ ಹೆಂಡತಿಯೂ ಸುಖವಾಗಿರಬೇಕು' ಎಂದು ಸದಾ ಒದರುತ್ತಿರುವಳು.

ಮಾರಿಯ ಹೆಂಡತಿಯಾದ ಪೂವಾಯಿಗೆ ಹದಿನೈದೇ ವರ್ಷವಾದರೂ ಬಹು ಚುರುಕಿನಿಂದ ಕೆಲಸ ಮಾಡುವಳು. ಕಾಡಿಗೆ ಧೈರ್ಯವಾಗಿ ಹೋಗಿ ಸುತ್ತಿ ಸೌದೆಯನ್ನು ತರುವಳು. ಸುಮ್ಮನೆ ಒಂದು ನಿಮಿಷವಾದರೂ ಇರಲಾರಳು. ಬಿಡುವಾದಾಗ ಹುಲ್ಲು ಕೆತ್ತುವಳು. ಅಥವಾ ಎಲ್ಲಿಯಾದರೂ ಹೋಗಿ ಕೇಳಿಕೊಂಡು ಕೆಲಸವನ್ನು ಸಂಪಾದಿಸಿ ಕೂಲಿಯನ್ನು ಗಳಿಸುವಳು. ಹುಲ್ಲು ಅಥವಾ ಸೌದೆ ಹೊರೆಯನ್ನು ತೆಗೆದುಕೊಂಡು ಹೋದರೆ ಇವಳ ಹೊರೆಗೆ ಹೆಚ್ಚಾಗಿಯೇ ಬೆಲೆ ಕೊಡುವರು. ಹೇಗೋ ತನ್ನ ಸಾಮರ್ಥ್ಯ

ದಿಂದ ವಾರದಲ್ಲಿ ಎರಡು ಮೂರು ದಿನ ತಪ್ಪದೆ ಬೆಳ್ಳಿಯ ನಾಣ್ಯವಾಗಿ ಎರಡಾಣೆ ತೆಗೆದುಕೊಂಡು ಬಂದು ನಗೆಮುಖದಿಂದ ಗಂಡನಿಗೆ ಕೊಡುವಳು.

ಆ ವರ್ಷ ಮಳೆ ಒಂದು ಹನಿಯಾದರೂ ಬರಲಿಲ್ಲ. ನಾಲ್ಕು ವರ್ಷದಿಂದ ಮಳೆಯು ಸರಿಯಾಗಿ ಆಗುತ್ತಿರಲಿಲ್ಲ. ಆದರೆ ಆ ವರ್ಷದಂತಹ ವೀರಕ್ಷಾಮ ಅದಕ್ಕೆ ಹಿಂದೆ ಇರಲಿಲ್ಲ. ಬಾವಿಗಳೆಲ್ಲ ಬತ್ತಿಹೋದುವು. ಬೆಳೆಯೇ ಇಲ್ಲ. ಕುಡಿಯುವ ನೀರಿಗೂ ಕಷ್ಟವಾಯಿತು. ಅನೇಕರು ಊರನ್ನೇ ಬಿಟ್ಟು ಹೋದರು.

ಮಾರಿಯೂ ತನ್ನ ಹೆಂಡತಿಯೊಡನೆ ಎಲ್ಲಿಯಾದರೂ ಹೋಗಿ ಜೀವನೋಪಾಯವನ್ನು ಹುಡುಕಬೇಕೆಂದು ನೋಡಿದನು. 'ನಾವಿಲ್ಲಿಯೇ ಇದ್ದು ಸತ್ತು ಹೋಗೋಣ. ಎಲ್ಲಿ ಹೋದರೇನು ? ದೈವವು ಅಲ್ಲಿ ಕಾಯುವುದಾದರೆ ಇಲ್ಲಿ ಕಾಯದೇ' ಎಂದು ಹೇಳಿ ಮುಷ್ಕರ ಹಿಡಿದಳು. ದುರ್ಬಲಳಾದ ತಾಯಿಯ ಮಾತನ್ನು ಮೀರಲಾರದೆ ಸುಮ್ಮನಿದ್ದನು.

ಕೇರಿಯಲ್ಲಿ ಐದು ಮನೆಗಳು ಮಾತ್ರ ಖಾಲಿಯಾಗಲಿಲ್ಲ. ಉಳಿದ ಮನೆಯವರೆಲ್ಲರೂ ಊರನ್ನು ಬಿಟ್ಟು ಹೋದರು. ಕೇರಿಗೆ ಸೇರಿದ ನೀರಿನ ಕುಂಟೆ ಬತ್ತಿಹೋಗಿ ಬಹು ದಿನಗಳಾದವು. ಪಕ್ಕದಲ್ಲಿ ಒಬ್ಬ ಒಕ್ಕಲಿಗನ ತೋಟ ; ಅಲ್ಲಿ ಒಂದು ಬಾವಿಯಲ್ಲಿ ಸ್ವಲ್ಪ ನೀರಿತ್ತು. ಆ ಒಕ್ಕಲಿಗನು ಅದರಲ್ಲಿ ಕಪಿಲೆ ಕಟ್ಟಿ ನೀರು ಹರಿಸಿ ಸ್ವಲ್ಪ ಬೆಳೆಯನ್ನು ಕಾಪಾಡುತ್ತ ಬಂದನು. ಬಾವಿಯಿಂದ ನೀರನ್ನು ತೆಗೆದು ಎತ್ತುಗಳನ್ನು ಬಿಚ್ಚಿ ಅವುಗಳನ್ನು ತೊಳೆದ ಮೇಲೆ ಆ ಕಾಲುವೆಯಲ್ಲಿದ್ದ ನೀರನ್ನು ಹೊಲೆಯರು ತೆಗೆದುಕೊಳ್ಳತಕ್ಕದ್ದು. ಬಾವಿಯಲ್ಲಿ ಹೊಲೆಯರು ತಮ್ಮ ಕೊಡವನ್ನು ಬಿಡಕೂಡದು. ಬಿಟ್ಟರೆ ಮೈಲಿಗೆಯಾಗುವುದು. ಆದುದರಿಂದ ಅವರು ಕಾಲುವೆಯಿಂದ ನೀರು ತೆಗೆದುಕೊಳ್ಳಬೇಕು. ಇತರ ಒಕ್ಕಲಿಗರು ಇಷ್ಟಕ್ಕೂ ಅವಕಾಶ ಕೊಡರು. ಒಂದು ಮನೆಯವರು ದಿನವಹಿ ತೆಗೆದುಕೊಳ್ಳುವ ನೀರು ಜಮೀನಿಗೆ ಸ್ವಲ್ಪ ಉಪಯೋಗವಾಗುವದಲ್ಲವೇ ? ಆದರೆ ಕುಟ್ಟೆಗೌಡನು ಒಳ್ಳೆಯವನು. 'ಪಾಪ, ಬಡ ಹೊಲೆಯರು ಕುಡಿಯುವುದಕ್ಕೆ ನೀರಿಲ್ಲದೆ ಸಾಯುವರು.' ಎಂದು ಕರುಣ ತೋರಿ ಅವರು ನೀರು ತೆಗೆದುಕೊಳ್ಳಲು ಸಮ್ಮತಿಸಿದನು.

ಬೆಳಿಗ್ಗೆ ಇಂದು ಹೆಂಗಸರು ಕಾದಿರುವರು. ನಾನು ಮುಂದು ತಾನು ಮುಂದೆಂದು ಜಗಳವಾಡುವರು. ಕಾಲುವೆಯ ಹಳ್ಳದಲ್ಲಿ ನಿಂತಿರುವ ನೀರು ಬಹಳ ಸ್ವಲ್ಪ. ಆದುದರಿಂದ ಜಗಳ. ಅವರಾಡುವ ಜಗಳದಲ್ಲಿ ಒಂದೊಂದು ದಿನ ಕಾಲುವೆಯ ನೀರು ಕೆಸರಾಗುವುದು. 'ನೋಡಿ ಬುದ್ಧಿ—ದುಷ್ಟಳು ನೀರನ್ನು ಕಲಕಿರುವಳು.' ಎಂದು ಒಬ್ಬಳ ಮೇಲೆ ಮತ್ತೊಬ್ಬಳು ಒಕ್ಕಲಿಗನ ಬಳಿ ದೂರು ಹೇಳುವರು ಈ ಜಗಳದ ತಮಾಷೆಯನ್ನು ನೋಡುತ್ತ ನಿಂತಿರುವ ಒಕ್ಕಲಿಗರು 'ಈ ಹೊಲೆ ನಾಯಿಗಳ ಬಾಳೇ ಹೀಗೆ' ಎನ್ನುವರು. ಆನಂತರ ಹೆಂಗಸರು ಆ ಕೆಸರಿನ ನೀರನ್ನೇ ಬಾಚಿ ತುಂಬಿಕೊಂಡು ಹೋಗುವರು. ಮನೆಯಲ್ಲಿ ಕೊಡದಲ್ಲಿಟ್ಟರೆ ತಿಳಿನೀರಾಗುವುದಲ್ಲವೇ?

೭

ಕುಟ್ಟಿಗೌಡನ ತೋಟದ ಶಾಲೆಯಲ್ಲಿ ವಾಡಿಕೆಯಂತೆ ಅವನ ಮಕ್ಕಳಿಬ್ಬರು ಓದುತ್ತಿದ್ದರು. ರಾತ್ರಿ ಕಾವಲಿರಲು ಅಲ್ಲಿ ಬೆಳೆ ಏನೂ ಇಲ್ಲ! ಆದರೆ ಅರೆಹೊಟ್ಟೆ ಮೇದು ಎಲುಬು ಗೂಡಾಗಿದ್ದ ನಾಲ್ಕು ಎತ್ತೂ ನಾಲ್ಕೈದು ಕುರಿಗಳೂ ಇದ್ದವು. ನೀರುಚೆಲ್ಲಿದ ಪಾತ್ರೆಯೂ ಹಗ್ಗವೂ ಬಿದ್ದಿದ್ದವು. ಇವುಗಳನ್ನು ಯಾರಾದರೂ ತೆಗೆದುಕೊಂಡು ಹೋಗಬಹುದಲ್ಲವೇ? ಬರಗಾಲದಲ್ಲಿ ಸಿಕ್ಕಿದ್ದನ್ನು ಎತ್ತಿಕೊಂಡು ಹೋಗುವರು. ಇದಕ್ಕಾಗಿ ಕಾವಲಿರಲು ಶಾಲೆಯಲ್ಲಿ ಯಾರಾದರೂ ರಾತ್ರಿಯಲ್ಲಿ ಮಲಗುವುದು ವಾಡಿಕೆ.

ಅರ್ಧ ರಾತ್ರಿ. ನಭೋಮಂಡಲದ ಮಧ್ಯಭಾಗದಲ್ಲಿ ಪೂರ್ಣ ಚಂದ್ರ. ಆ ಬೆಳದಿಂಗಳಲ್ಲಿ ಕಾದುಹೋದ ಬೆಂಗಾಡುಗಳು ಕೂಡ ಹಾಲು ಹರಿದಿರುವಂತೆ ಸುಂದರವಾಗಿ ಕಾಣುವುವು. ಹಗಲಿನಲ್ಲಿಯೇ ಎಲ್ಲಿ ನೋಡಿದರೂ ಕ್ಷಾಮದ ಪ್ರತ್ಯಕ್ಷ ದರ್ಶನ. ರಾತ್ರಿಯಲ್ಲಿ ಎಲ್ಲವೂ ಬಳಲಿ ಶಮನ ಹೊಂದಿ ಮರೆಯಾಗಿದ್ದವು. ಕ್ಷಾಮವು ಕೂಡ ರಾತ್ರಿಯಲ್ಲಿ ನಿದ್ದೆ ಮಾಡುವುದಿಲ್ಲವೆ? ಮನುಷ್ಯನಿಗಿರುವ ಕಷ್ಟಗಳಿಗೆ ಅವನು ಸ್ವಲ್ಪ ಹೊತ್ತು ಅವುಗಳನ್ನು ಮರೆತು ನಿದ್ದೆ ಹೋಗಬಹುದಾದುದು ಒಂದು ಪರಿಹಾರದ ಉಪಾಯವಲ್ಲವೆ?

ನಿಶ್ಶಬ್ದವಾಗಿದ್ದ ಆ ಅರ್ಧ ರಾತ್ರಿಯಲ್ಲಿ ಇದ್ದಕ್ಕಿದ್ದ ಹಾಗೆ ನಾಯಿ ಬಗುಳಿತು ಒಂದು ಬಗುಳಿದ ಕೂಡಲೆ ಎಲ್ಲಾ ನಾಯಿಗಳೂ ಬಗುಳತೊಡಗಿ

ದವು. 'ಯಾರು ? ಕಳ್ಳ' ಎಂದು ಕುಟ್ಟಿಗೌಡನ ಚಿಕ್ಕ ಮಗನು ಎದ್ದು ಕೂಳಿತುಕೊಂಡನು. ಬಾವಿಯ ಕಪಿಲೆಯನ್ನು ತೆಗೆದುಕೊಂಡು ಯಾರೋ ಮರಗಳ ನೆರಳಿನಲ್ಲಿ ಮೆತ್ತಗೆ ಜಾರಿಕೊಂಡು ಹೋದ ಹಾಗೆ ತೋರಿತು. 'ಏಳು, ಅಣ್ಣಾ, ಯಾರೋ ಕಳ್ಳ ಓಡುತ್ತಾನೆ' ಎಂದು ಮತ್ತೆ ಕೂಗಿ ಕೊಂಡನು. 'ಏನು? ಏನು?' ಎಂದು ಶೆಂಗೋಡನು ಕಣ್ಣನ್ನು ಒರೆಸುತ್ತ ಎದ್ದನು. ತಕ್ಷಣವೆ 'ಓ ಮಾವಾ ! ಓ ರಾಕ್ಕಿಯ ಗೌಡಾ ! ಓ ಕಾಳಿ !— ಕಪಿಲೆ ತೆಗೆದುಕೊಂಡು ಓಡುತ್ತಾನೆ ಕಳ್ಳ, ಓಡಿಬನ್ನಿರಿ, ಓಡಿಬನ್ನಿರಿ' ಎಂದು ಗಟ್ಟಿಯಾಗಿ ಕೂಗಿಕೊಂಡು ಆಳು ಹೋದ ದಿಕ್ಕಿನಲ್ಲಿ ಓಡಿದನು.

ಇಷ್ಟರಲ್ಲಿ ಊರಿನಲ್ಲಿದ್ದ ನಾಯಿಗಳೆಲ್ಲ ಬಗುಳಲಾರಂಭಿಸಿದವು. 'ತೋಟದಲ್ಲಿ ಕಳ್ಳನು ದೂರಿದನು' ಎಂದೂ, 'ಹಿಡಿ, ಹಿಡಿ' ಎಂದೂ—ಹಲವು ವಿಧವಾದ ಕೂಗಾಟಗಳೆದ್ದವು. ಪಕ್ಕದಲ್ಲಿದ್ದ ಎಲ್ಲರೂ ಓಡಿಬಂದರು. ಕೊನೆ ಯಲ್ಲಿ ಕಳ್ಳ ಸಿಕ್ಕಿದನು. ಸಿಕ್ಕಿದ ಕಳ್ಳನನ್ನು ನೋಡಿದರೆ ಒಬ್ಬ ಹುಡುಗಿ. ಅವಳ ಕೈಯಲ್ಲಿ ಮಡಿಕೆಯೂ ಹಗ್ಗವೂ ಇದ್ದವು. ಕದ್ದುದು ನೀರು ! ಬಾವಿ ಯಲ್ಲಿ ತನ್ನ ಕೊಡವನ್ನು ಹಾಕಿ ನೀರು ತುಂಬಿಕೊಂಡಿದ್ದಳು. 'ಪಾಪಿ ಹೊಲೆಯರವಳು ಬಂದು ಬಾವಿಯಲ್ಲಿ ಕೊಡವನ್ನು ಬಿಟ್ಟಳೇ' ಎಂದು ಬೊಬ್ಬೆ ಹಾಕಿದರು. ಆ ಕ್ಷಣ 'ಹೊಡಿ ! ಬಡಿ ! ಕೊಲ್ಲು ! ಒಡಿ ಮಡಿಕೆ ಯನ್ನು' ಎಂದು ಎಲ್ಲ ಕಡೆಯೂ ಬೊಬ್ಬೆ ಎದ್ದಿತು. ಮಡಿಕೆಯೂ ಒಂದು ನಿಮಿಷದಲ್ಲಿ ಚೂರುಚೂರಾಯಿತು. ಒದೆತ ಹೊಡೆತಗಳು ನಿಲ್ಲದೆ ಒಂದರ ಮೇಲೊಂದು ಬಿದ್ದವು. ಹುಡುಗಿ ಪ್ರಜ್ಞೆ ತಪ್ಪಿ ನೆಲದ ಮೇಲೆ ಬಿದ್ದಳು.

'ಸತ್ತುಹೋದಳು. ಇನ್ನು ಹೊಡೆಯಬೇಡಿರೊ' ಎಂದನು ರಾಕ್ಕಿಯ ಗೌಡನು.

'ಗುಣಿ ಅಗೆದು ಸಾಯನ್ನು ಮುಚ್ಚಿರೊ' ಎಂದ ಇನ್ನೊಬ್ಬ.

'ಹೌದು, ತಂಟೆ ಇಲ್ಲದೆ ಹೋಗುವುದು' ಎಂದ ಮತ್ತೊಬ್ಬ.

ಗುಣಿ ತೆಗೆಯುವುದು, ಮುಚ್ಚುವುದು, ಈ ಮಾತೆದ್ದ ಮೇಲೆ ಎಲ್ಲ ರಿಗೂ ಸ್ವಲ್ಪ ಬುದ್ಧಿ ಬಂದಂತಾಯಿತು. ಹೊಡೆಯುತ್ತಲೇ ಇರುವುದಕ್ಕಾಗು ವುದಿಲ್ಲ, ಅದಕ್ಕೆ ಕೊನೆಯುಂಟೆನ್ನುವುದನ್ನು ಮನಗಂಡರು.

‘ಯಾರೋ ಇವಳು ? ಯಾರಿಗಾದರು ಗೊತ್ತೆ ? ನೋಡಿ’ ಎಂದನು ಒಬ್ಬ ಮುದುಕ.

ಕುಟ್ಟಿಗೌಡನ ದೊಡ್ಡಮಗ ಶಿಂಗೋಡನು ‘ಕಂಡಿ ಮಾರಿಯ ಹೆಂಡತಿ ಯೇನೋ? ಅಯ್ಯೋ ಪಾಪ. ಇವಳು ಒಳ್ಳೆಯ ಹುಡುಗಿಯೋ. ಇವಳೇ ತಕ್ಕೆ ಈ ಕೆಲಸ ಮಾಡಿದಳು ?’ ಎಂದನು ಶಿಂಗೋಡ ಕುಟ್ಟಿ.

‘ನಿನ್ನೆ ನೀರಿಲ್ಲ ಹೋಗಿರೆಂದು ಎಲ್ಲಾ ಹೊಲೆ ಹುಡುಗಿಯರನ್ನು ಓಡಿಸಿಬಿಟ್ಟೆ. ಆದುದರಿಂದ ಈ ರೀತಿ ತುಂಟತನ ಮಾಡಿದಳು’ ಎಂದನು ಚಿಕ್ಕ ಮಗ.

‘ಈ ಘೋರ ಕ್ಷಾಮದಲ್ಲಿ ಜಾತಿ ಯಾವುದು ? ದೇಶ ಯಾವುದು ? ಎಲ್ಲಾ ಒಂದಾಗಿ ಹೋಗಿ ಬಿಟ್ಟಿತು. ಒಳ್ಳೆಯದೂ ಇಲ್ಲ, ಕೆಟ್ಟದ್ದೂ ಇಲ್ಲ.’ ಎಂದು ಉದ್ದವಾದ ಗೌಡನೊಬ್ಬನು ಕೆಳಗೆ ಬಿದ್ದಿದ್ದ ಹುಡುಗಿಯ ಬಳಿ ನಿಂತುಕೊಂಡು ಹೇಳಿದನು.

‘ಎಲೋ, ಅವಳು ಸಾಯಲಿಲ್ಲ, ಏನೂ ಇಲ್ಲ. ಬರಿ ಬೂಟಾಟಿಕೆ. ಒದೆಯೋ. ಒದೆ ಬಿದ್ದರೆ ಎದ್ದು ಮನೆಗೆ ಓಡುವಳು.’ ಎಂದೊಬ್ಬನು ಹೇಳಿಕೊಂಡು ಒಂದು ಒದೆಯನ್ನೂ ಕೊಟ್ಟನು. ಇತರರೂ ಈ ಚಿಕಿತ್ಸೆ ಯನ್ನು ಪ್ರಯೋಗಿಸಿದರು. ಸ್ವಲ್ಪ ಕದಲಿದ ಹಾಗೆ ಕಂಡಿತು. ಆದರೆ ಏಳಲೂ ಇಲ್ಲ, ಮಾತನಾಡಲೂ ಇಲ್ಲ.

ರಾಕ್ಕಿಯಾಗೌಡನು ‘ಎಲೋ, ಈ ನಾಯನ್ನು ಎತ್ತಿಕೊಂಡು ಹೋಗಿ ಕೇರಿಯಲ್ಲಿ ಬಿಸಾಟು ಬನ್ನಿರೊ’ ಎಂದನು. ರಾಕ್ಕಿಯಾಗೌಡನಿಗೆ ಖೂನಿ ಕೇಸಿನ ಅನುಭವವುಂಟು. ಅದರ ಕಷ್ಟ ಅವನಿಗೆ ಸ್ವಲ್ಪ ತಿಳಿದಿರುವುದು. ಅವನು ಸೆಷನ್ಸ್‌ವರೆಗೂ ಒಂದು ವಿಚಾರಣೆಯಲ್ಲಿ ಹೋಗಿದ್ದವನು.

ರಾಕ್ಕಿಯಾಗೌಡನು ಹೇಳಿದಂತೆ ಮೂರು ನಾಲ್ಕು ಮಂದಿ ಕೆಳಗೆ ಬಿದ್ದಿದ್ದ ಹುಡುಗಿಯನ್ನೆತ್ತಿಕೊಂಡು ಕೇರಿಯ ಕಡೆ ಹೊರಟರು.

೮

ಹಿರಿಯರಿಲ್ಲದ ಅನಾಥ ಮಕ್ಕಳ ಚರಿತ್ರೆಯನ್ನು ನಿಜವಾದ ರೀತಿಯಲ್ಲಿ ವಿಶದಗೊಳಿಸಿ ಬರೆದರೆ ಎಲ್ಲರಿಗೂ ಬಹು ಉಪಯುಕ್ತವಾಗಿರುವುದು. ನಾವು ಅನೇಕರು ಅವರಂತೆ ನಿರ್ಭಾಗ್ಯರಾಗಿಲ್ಲದಿದ್ದರೂ ಅವರ ಅನುಭವಗಳಿಂದ

ಹಲವು ವಿಷಯಗಳನ್ನು ಕಲಿತು ಫಲ ಹೊಂದಬಹುದು. ಮುಕುಂದನ ಅನುಭವಗಳೂ ಅಂತಹವೇ. ತಾಯಿಯನ್ನು ಕಳೆದುಕೊಂಡು ಅವನು ದಿಕ್ಕುಗೆಟ್ಟವನಂತೆ ಅಲೆದಾಡಿ ಬೆಳೆದ ಕತೆಯನ್ನು ಬರೆದರೆ ಒಂದು ಭಾರತವೇ ಆಗುವುದು. ಆದರೆ ಅವನು ತನ್ನ ಚರಿತ್ರೆಯನ್ನು ಬರೆದಿಡಲಿಲ್ಲ. ಕೇಳಿ ಬರೆಯುವುದು ಆರಿದ ಗಂಜಿಯಂತೆ ರುಚಿಯಾಗಿರದು. ಆ ಕತೆಯನ್ನು ವಿಶದಗೊಳಿಸದೆ ಬಿಟ್ಟುಬಿಡುವೆನು.

ದಿಕ್ಕುಕೆಟ್ಟ ಮಕ್ಕಳಿಗೆ ಮತ್ತೇನಿಲ್ಲದಿದ್ದರೂ ದೇಶವನ್ನು ಸುತ್ತುವ ಭಾಗ್ಯವುಂಟು. ಭೂಗೋಳಶಾಸ್ತ್ರವು ಅವರಿಗೆ ಅನುಭವಕ್ಕೆ ಬಂದ ಪಾಠ. ಮುಕುಂದನೂ ಭಾರತದೇಶದಲ್ಲೆಲ್ಲಾ ಅಲೆದು ತಿರುಗಿ ಬಹು ಕಷ್ಟಪಟ್ಟು ಹೇಗೋ ಮುಂದಕ್ಕೆ ಬಂದನು. ಕೊನೆಗೆ ಡಾಕ್ಟರ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಒಂದೆರಡು ಊರುಗಳಲ್ಲಿದ್ದು ಅನಂತರ ಸ್ವಂತ ಊರಿಗೇ ಡಾಕ್ಟರಾಗಿ ಬಂದು ಸೇರಿದನು.

ಒಂದು ದಿನ ಕಮಲಾಪುರದ ಆಸ್ಪತ್ರೆಯಲ್ಲಿ ಡಾ. ಮುಕುಂದನು ಮೇಜಿನ ಮೇಲೆ ಔಷಧ ಕೊಟ್ಟ ಲೆಕ್ಕಗಳನ್ನಿಟ್ಟುಕೊಂಡು ನೋಡುತ್ತಿದ್ದನು. ಬೆಳಗಾಗುತ್ತಿತ್ತು. ಆ ವೇಳೆಗೆ ಹೊರಗೆ ನಾಲ್ಕು ಆಳುಗಳು ತಾವು ಹೊತ್ತುಕೊಂಡು ಬಂದಿದ್ದ ಹಗ್ಗದ ಮಂಚವನ್ನು ಮೆತ್ತಗೆ ಕೆಳಗಿಟ್ಟು— 'ಸ್ವಾಮಿ' ಎಂದರು. 'ಹೊಲೆಯರಂತೆ ಕಾಣುವುದು. ಏನು? ಖೂನಿಯೆ? ಹೋಗಿ ನೋಡಿ' ಎಂದು ಮುಕುಂದನು ಕಾಂಪೌಂಡರಿಗೆ ಹೇಳಿದನು.

ಆ ಊರಿನ ಶಾಲೆಯ ಮುಖ್ಯೋಪಾಧ್ಯಾಯರು ಅಲ್ಲಿ ಕುಳಿತಿದ್ದರು. ಅವರು ಪ್ರತಿದಿನವೂ ಬೆಳಿಗ್ಗೆ ದೇಹಾರೋಗ್ಯಕ್ಕಾಗಿ ಸ್ವಲ್ಪ ದೂರ ನಡೆದು ಹೋಗಿ ಆಸ್ಪತ್ರೆಯಲ್ಲಿ ಡಾಕ್ಟರೊಡನೆ ಅರ್ಧ ಘಂಟೆ ಹರಟೆ ಹೊಡೆದು ಹೋಗುವುದು ವಾಡಿಕೆ.

'ಒಂದು ವಾರವೂ ತಪ್ಪದೆ ಈ ಊರಿನಲ್ಲಿ ಖೂನಿ. ಒಂದು ಶವದ ಪರೀಕ್ಷೆ. ಬಲು ಕೆಟ್ಟ ಊರಿದು. ನಾನಿದ್ದ ಬೇರೆ ಯಾವ ಆಸ್ಪತ್ರೆಯಲ್ಲೂ ಹೀಗಿಲ್ಲ' ಎಂದನು ಮುಕುಂದನು.

'ಓದಿಲ್ಲದ ಜನಗಳು. ಯಾವಾಗಲೂ ಜಗಳವಾಡುವರು. ಬಾಯಿ ಮಾತಿನಿಂದ ಆಗಲೆ ಏಟು, ಹೊಡೆತ. ಖೂನಿಯಾಗುವುದು ಸರ್ವಸಾಧಾ

ರಣ. ಪ್ರಾಥಮಿಕ ಶಿಕ್ಷಣ ಹರಡಿದರೇನೇ ಇವೆಲ್ಲವೂ ನಿಲ್ಲುವುದು' ಎಂದರು ಮುಖ್ಯೋಪಾಧ್ಯಾಯರು.

ಇಷ್ಟರಲ್ಲಿ ಕಾಂಪೌಂಡರ್ ಮುತ್ತುಪಿಳ್ಳೆ ತಿರುಗಿ ಬಂದು 'ಶವವಲ್ಲ. ಒಬ್ಬ ಹುಡುಗಿಯನ್ನು ಬಲವಾಗಿ ಹೊಡೆದು ಮಂಚದಲ್ಲಿ ಹಾಕಿಕೊಂಡು ಬಂದಿರುವರು' ಎಂದರು.

'ವಯಸ್ಸೆಷ್ಟು?' ಎಂದರು ಮುಖ್ಯೋಪಾಧ್ಯಾಯರು. ಈ ಪ್ರಶ್ನೆಯನ್ನು ಗಮನಿಸದೆ ಮುಕುಂದನು 'ಒಳಗೆ ಕರೆದುಕೊಂಡು ಬಂದು ಮೇಜಿನ ಮೇಲೆ ಇಳಿಸಲು ಹೇಳು' ಎಂದನು.

ಮುಖ್ಯೋಪಾಧ್ಯಾಯರು ಹುಸಿನಗೆಯಿಂದ 'ಯಾವುದೋ ಕಳ್ಳಸ್ನೇಹ. ಆದರಿಂದ ಬಂದ ಆಪತ್ತೆಂದು ತೋರುತ್ತದೆ' ಎಂದು ಹೇಳುತ್ತ ಎದ್ದರು.

'ಇದ್ದರೂ ಇರಬಹುದು. ಹೋಗಿ ನೋಡೋಣ' ಎಂದು ಮುಕುಂದ ನೆಮ್ಮದಿ ಮೇಜನ ಬಳಿ ಹೋದನು. ಹುಡುಗಿಯನ್ನು ಹೊತ್ತು ತಂದ ಆಳುಗಳು ಅವಳನ್ನು ನಿಧಾನವಾಗಿ ಮಂಚದಿಂದ ಎತ್ತಿಕೊಂಡು ಬಂದು ಮೇಜಿನ ಮೇಲೆ ಮಲಗಿಸಿದರು.

ಮುಕುಂದನು ಗಾಯಗಳನ್ನು ನೋಡುತ್ತ 'ಬಲವಾಗಿ ಹೊಡೆದು ಹಾಕಿರುತ್ತಾರೆ' ಎಂದನು. ಚೆನ್ನಾಗಿ ಪರೀಕ್ಷೆ ಮಾಡಿ ನೋಡಲು ಎರಡೂ ಕೈಮೂಳೆಗಳು ಒಡೆದು ಹೋದಂತೆ ತಿಳಿಯ ಬಂದಿತು. ಉಳಿದವು ಮೇಲಿನ ಚರ್ಮದ ಗಾಯಗಳು.

ಹುಡುಗಿಯನ್ನು ಹೊತ್ತು ತಂದ ಆಳುಗಳಲ್ಲಿ ಮಾರಿ ಒಬ್ಬನು. 'ಬದುಕುವಳೇ ಬುದ್ಧಿ?' ಎಂದು ಅವನು ಕೇಳಿದನು.

'ನಿನಗೇನಾಗಬೇಕಯ್ಯ ಇವಳು?' ಎಂದನು ಮುಕುಂದನು.

'ನನ್ನ ಹೆಂಡತಿ ಸ್ವಾಮಿ. ಬದುಕುವಳೇ?' ಎಂದು ಕಣ್ಣಿನಲ್ಲಿ ನೀರು ತುಳುಕುತ್ತಿರಲು ಮತ್ತೆ ಕೇಳಿದನು.

'ಎಲ್ಲವೂ ಸರಿಹೋಗುವುದು. ಭಯಪಡಬೇಡ. ಆಸ್ಪತ್ರೆಯಲ್ಲಿ ಒಂದು ತಿಂಗಳು ಇಟ್ಟಿರಬೇಕು' ಎಂದನು ಮುಕುಂದನು.

ಇದನ್ನು ಕೇಳುತ್ತಲೇ 'ಅಯ್ಯೋ' ಎಂದು ಕೂಗಿ 'ಒಂದು ತಿಂಗಳ ಗಂಜಿಗೆ ಏನು ಮಾಡುವೆನು ?' ಎಂದನು.

'ಹುಚ್ಚಾ. ಗಂಜಿ ನಾವು ಹಾಕುತ್ತೇವೆ. ಭಯಪಡಬೇಡ' ಎಂದನು ಮುಕುಂದನು.

ಆಗ ಬಂದಿದ್ದವರಲ್ಲೊಬ್ಬನು 'ಎಲೋ ಮಾರಿ ! ನಿನಗೆ ಗೊತ್ತಿಲ್ಲವೇ? ಸ್ವಾಮಿಯವರು ನಮ್ಮೂರಿನವರೋ ! ಡಾಕ್ಟರ್ ಸಾಹೇಬರು ನಮ್ಮ ಬೇವಿನ ಮರದ ಅಯ್ಯನವರ ಮಗ ! ನಮ್ಮನ್ನು ಕಾಪಾಡುವರು ಸ್ವಾಮಿಯವರು. ವಾಸಿಮಾಡುವರು' ಎಂದನು.

ಮತ್ತೊಬ್ಬನು ಗಂಜಿ ಹಾಕಿ ಗುಣ ಮಾಡುವರು. ನಿನಗೆ ಕೂಡ ಅನ್ನ ಹಾಕುವರು. ಏನೋ ಅಳುತ್ತೀಯೆ' ಎಂದನು.

ಮೂವರೂ ಸೇರಿ 'ನಮ್ಮ ಬುದ್ಧಿಯವರು ನಮ್ಮನ್ನು ಕಾಪಾಡುವರೋ' ಎಂದರು.

ಮಾರಿ ಇಷ್ಟು ಹೊತ್ತಿಗೆ ತಲೆಯೆತ್ತಿ ಡಾಕ್ಟರ ಮುಖವನ್ನು ನೋಡಿದನು. 'ಸ್ವಾಮಿ, ತಾವು ಮುಕುಂದ ಅಯ್ಯನವರಲ್ಲವೇ?' ಎಂದು ಕೇಳಿದನು.

'ಹೌದು, ಹೌದು' ಎಂದು ಮುಕುಂದನು ಮುರಿದು ಹೋದ ಕೈಗಳನ್ನು ನೋಡುತ್ತ ಹೇಳಿದನು.

'ನಾನು ಹೋಗಿ ಬರುತ್ತೇನೆ, ಡಾಕ್ಟರವರೆ' ಎಂದು ಮುಖ್ಯೋಪಾಧ್ಯಾಯರು ನಮಸ್ಕಾರ ಮಾಡಿದರು.

'ಒಳ್ಳೆಯದು, ನಮಸ್ಕಾರ' ಎಂದು ಮುಕುಂದನು ಅವರಿಗೆ ಹೇಳಿಬಿಟ್ಟು 'ಏನು ಜಗಳ ? ಏತಕ್ಕೆ ಈ ಏಟು ? ನಡೆದ ವಿಷಯ ಹೇಳು ತಮ್ಮಾ' ಎಂದು ಮಾರಿಯನ್ನು ಕೇಳಿದನು.

ಬಂದವರು ನಡೆದ ವೃತ್ತಾಂತವನ್ನು ಹೇಳಿದರು. ಕತೆಯನ್ನು ಹೇಳುವಾಗ ಎಲ್ಲರೂ ಒತ್ತಟ್ಟಿಗೆ ಮಾತನಾಡುತ್ತಿದ್ದದ್ದರಿಂದ ವಿಷಯಗಳನ್ನು ತಿಳಿದುಕೊಳ್ಳುವುದು ಸ್ವಲ್ಪ ಕಷ್ಟವಾಗಿಯೇ ಇತ್ತು.

೯

'ಮುತ್ತುಪಿಳ್ಳೆ, ಯಾವುದಾದರೂ ಹೂ ಆರಿಸಿ ಇಟ್ಟಿದೀಯಾ? ಎಂದು ಡಾಕ್ಟರ್ ಕೇಳಿದರು.

'ಇಲ್ಲ, ಸ್ವಾಮಿ. ಹೂ ಯಾವುದು? ಆರಿಸುವುದು ಏನನ್ನು? ಗಿಡಗಳೆಲ್ಲವೂ ಒಣಗಿ ಬಿದ್ದಿವೆ' ಎಂದು ಕಾಂಪೌಂಡರು ಹೇಳಿದನು.

'ಈ ಹುಡುಗಿಯ ಹತ್ತಿರ ಬಂದರೆ ಮಲ್ಲಿಗೆ ವಾಸನೆ ಬರುತ್ತದೆ. ಏನು ಕಾರಣ? ಅಮ್ಮ ಕುಯ್ದಿಟ್ಟ ಮಲ್ಲಿಗೆ ಹೂವಿನ ವಾಸನೆಯಂತೆಯೇ ಇದೆ.' ಎಂದು ಮುಕುಂದನು ತನಗೆ ತಾನೇ ಹೇಳಿಕೊಂಡನು. ಈ ರೀತಿಯಾಗಿ ತನ್ನ ತಾಯಿಯನ್ನು ಸ್ಮರಿಸಿಕೊಂಡೇ ಪೂವಾಯಿಯ ಗಾಯಗಳಿಗೆಲ್ಲ ಮೆತ್ತಗೆ ಮದ್ದೊರಿಸಿದನು. ಅನಂತರ ಮೂಳೆ ಮುರಿದ ಕೈಗಳಿಗೆ ಮರದ ಹಲಿಗೆಯನ್ನಿಟ್ಟು ಕಟ್ಟಿದನು.

'ಅಪ್ಪ-' ಎಂದು ಅವಳು ದೊಡ್ಡ ಉಸಿರು ಬಿಟ್ಟು 'ಈಗ ಸ್ವಲ್ಪ ಸಹಿಸಿಕೊಳ್ಳುವ ಹಾಗಿದೆ—ಬುದ್ಧಿ. ದೇವರು ನಿನ್ನನ್ನು ಮಹಾರಾಜನನ್ನಾಗಿ ಮಾಡಲಿ. ನೀನು ಸುಖವಾಗಿರಬೇಕು. ಬುದ್ಧಿ' ಎಂದಳು.

ಈ ಮಾತುಗಳು ಆ ಹುಡುಗಿಯ ಬಾಯಿಂದ ಬಂದ ಸಮಯದಲ್ಲಿ ಅವಳ ನೋಟವೂ ಅವಳ ಮುಖದ ಕೃತಜ್ಞತೆಯೂ ತನ್ನ ಹೊಸ ಕೂಸನ್ನು ಕಂಡ ಹೆತ್ತ ತಾಯಿಯು ಆನಂದದಿಂದ ಮುಖವನ್ನು ಅರಳಿಸುವ ನೆನಪನ್ನು ತರುವುದಾಗಿದ್ದಿತು. ಮುಕುಂದನಿಗೆ ತನ್ನ ತಾಯಿಯ ಸ್ಮರಣೆಯು ಹೆಚ್ಚು ಹೆಚ್ಚಾಗಿ ಬಂದಿತು.

'ಇದೇನೋ ತಿಳಿಯಲಿಲ್ಲ. ಇವಳ ಬಳಿ ಬರುವಾಗಲೆಲ್ಲ ಅಮ್ಮನ ಜ್ಞಾಪಕ ಉಕ್ಕಿ ಬರುವುದು' ಎಂದು ಮತ್ತೆ ತನ್ನೊಳಗೆ ತಾನೆ ಹೇಳಿಕೊಂಡು ಮುಕುಂದನು ಕೈತೊಳೆಯಲು ಹೋದನು. ಎಲ್ಲಿ ಹೋದರೂ ಮಲ್ಲಿಗೆಯ ವಾಸನೆ ತುಂಬಿದ ಹಾಗಿತ್ತು. ಮುಕುಂದನ ತಾಯಿಗೆ ಮಲ್ಲಿಗೆ ಹೂವೆಂದರೆ ಬಲು ಇಷ್ಟ. ಗಂಡನು ಸತ್ತಮೇಲೆ ಹೂ ಮುಡಿದುಕೊಳ್ಳುವುದಕ್ಕಾಗದೆ ಹೋದ ಮೇಲೂ ಪ್ರತಿದಿನವೂ ತಪ್ಪದೆ ಎಲ್ಲಿಂದಲಾದರೂ ಮಲ್ಲಿಗೆ ಹೂವನ್ನು ಆರಿಸಿಕೊಂಡು ಬಂದು ಪೂಜೆಗೆ ಇಡುವಳು. ಮನೆಯಲ್ಲೆಲ್ಲವೂ ವಾಸನೆಯು ಹಬ್ಬಿರುವುದು. ಇಂದು ಮುಕುಂದನು ಎಲ್ಲಿಯೂ ಆ ತೆರದ ವಾಸನೆಯನ್ನು ಕಂಡನು.

ಈ ರೀತಿಯಾಗಿ ಕೆಲವು ಸಮಯಗಳಲ್ಲಿ ಕಾರಣವಿಲ್ಲದೆಯೇ ಯಾವುದೋ ಒಂದು ವಾಸನೆ ಅಥವಾ ಒಂದು ಹಾಡಿನ ಧಾಟಿ ಮನಸ್ಸಿನಲ್ಲಿ ಹೊಳೆದು,

ಅದರೊಂದಿಗೆ ಬಾಲ್ಯದ ಜ್ಞಾಪಕವು ಉದಯಿಸುವುದು ಹಲವರ ಅನುಭವ ದಲ್ಲಿಯೇ? ಕೆಲವು ವೇಳೆಗಳಲ್ಲಿ ಯಾವುದೋ ಹಿಂದೆ ನೋಡಿದ ಹೂ, ಹಿಂದೆ ಕೇಳಿದ ಹಾಡು, ಎಂದು ಮಾತ್ರ ಜ್ಞಾಪಕಕ್ಕೆ ಬರುವುದೇ ಹೊರತು ಎಂದು ನೋಡಿದುದೋ ಅಥವಾ ಕೇಳಿದುದೋ ಹೇಳಲ್ಲಿ ಕ್ಕಾಗದಿರುವುದು. ಇವುಗಳನ್ನು ಪೂರ್ವಜನ್ಮದ ಸ್ಮರಣೆಗಳೆಂದು ಕೆಲವರು ಹೇಳುವರು. ತಾನು ಕೂಸಾಗಿದ್ದಾಗ ವೇಲಂಪಟ್ಟಿ ಮನೆಯಲ್ಲಿ ತಾಯಿಯೊಡನೆ ಆಟವಾಡಿದ ಸನ್ನಿವೇಶ ಇಂದು ಮುಕುಂದನ ಮನಸ್ಸನ್ನು ಬಿಡದೆ ಆವರಿಸಿತು.

'ಇದೇನು ಆಶ್ಚರ್ಯ? ಈ ಮಲ್ಲಿಗೆ ಹೂವಿನ ವಾಸನೆಯು ಬಿಡಲೊಲ್ಲೆ. ನ್ನುವುದು! ಒಂದು ವೇಳೆ—ಸತ್ತವರು ಮತ್ತೆ ಹುಟ್ಟುವರೇ,—ಅಮ್ಮನೇ ಈ ಹುಡುಗಿಯಾಗಿ ಹುಟ್ಟಿದಳೋ ಏನೋ?' ಎಂದು ಈ ರೀತಿಯಾಗಿ ಯೋಚಿಸಿ ಮುಕುಂದನು ಮತ್ತೆ ಎದ್ದು ಆ ಹುಡುಗಿಯ ಮಂಚದ ಬಳಿ ಹೋದನು. ಕಣ್ಣನ್ನು ಮುಚ್ಚಿದ್ದವಳು ಕಣ್ಣನ್ನು ತೆಗೆದು ಇವನನ್ನು ನೋಡಿ ದಳು. ಆ ನೋಟವು ಮತ್ತೆ ಅವನಿಗೆ ತಾಯಿಯ ಸ್ಮರಣೆಯನ್ನುಂಟು ಮಾಡಿತು. ಎಲ್ಲೆಲ್ಲಿಯೂ ಮಲ್ಲಿಗೆ ಹೂವಿನ ವಾಸನೆಯೇ ತುಂಬಿತ್ತು.

## ೧೦

ಮುಕುಂದನು ಮಲಗಿದ ಕೂಡಲೇ ನಿದ್ದೆ ಹೋಗುವುದು ವಾಡಿಕೆ. ಈ ವಿದ್ಯೆಯನ್ನು ಉತ್ತರ ದೇಶದಲ್ಲಿ ತಾನು ಸಂಚಾರ ಮಾಡಿದ ದಿನಗಳಲ್ಲಿ ಒಬ್ಬ ಯೋಗಿಯಿಂದ ಕಲಿತುಕೊಂಡನು. ಮಲಗಿದ ಕೂಡಲೆ ನಿದ್ದೆ ಬಾರದೆ ಯೋಚನೆಗಳು, ಭಾವನೆಗಳು, ತರಂಗ ತರಂಗವಾಗಿ ಬರುವುದು ಎಲ್ಲರಿಗೂ ಸಾಧಾರಣವಾದ ಅನುಭವ. ಮುಕುಂದನು ಆ ಯೋಚನೆಗಳನ್ನು ದೂರ ಮಾಡಿ ಮನಸ್ಸನ್ನು ಅಡಗಿಸಿ ಮಲಗಿದ ಕೂಡಲೆ ನಿದ್ದೆ ಹೋಗುವಂತೆ ಸಾಧನೆ ಮಾಡಿಕೊಂಡಿದ್ದನು. ಆದರೆ ಇಂದು ಅದು ಸಿದ್ಧಿಸಲಿಲ್ಲ; ಏನು ಪ್ರಯತ್ನ ಪಟ್ಟರೂ ನಿದ್ದೆ ಹೋಗಲಾಗಲಿಲ್ಲ. ಸ್ವಲ್ಪ ಹೊತ್ತು ಹೊರಳಿ ಹೊರಳಿ ನೋಡಿ ಕೊನೆಯಲ್ಲಿ ಎದ್ದು ಕುಳಿತುಕೊಂಡು ದೀಪವನ್ನು ಹಚ್ಚಿ ಪುಸ್ತಕವನ್ನು ತೆಗೆದು ಕೊಂಡನು. ಅದು ಕಾಲವಾದ ಮಿತ್ರನೊಬ್ಬನು ಕೊಟ್ಟ ಭಗವದ್ಗೀತೆ.

ಅದನ್ನು ತೆಗೆದು ಓದಲಾರಂಭಿಸಿದನು. ಎರಡನೆಯ ಅಧ್ಯಾಯ ೨೨ ನೆಯ ಶ್ಲೋಕಕ್ಕೆ ಬಂದನು:

'ಒಬ್ಬನು ಹಳೆಯದಾದ ಬಟ್ಟೆಯನ್ನು ಬಿಸುಟು ಹಾಕಿ ಹೊಸ ಬಟ್ಟೆಯನ್ನು ಉಡುವಂತೆ ದೇಹದಲ್ಲಿ ವಾಸಮಾಡುವ ಆತ್ಮನು ಹಳೆಯ ದೇಹವನ್ನು ಬಿಟ್ಟು ಬೇರೆ ದೇಹವನ್ನು ಸೇರುವನು.'

'ಹೌದು—ಆದರೆ—ಸತ್ತವನಿಗೆ ಹೊಸ ಜನ್ಮದಲ್ಲಿ ಯಾವ ದೇಹವು ಸಿಗುವುದು? ಹಳೆಯ ದೇಹವನ್ನು ತೆಗೆಯಲಾದೀತೇ? ಅದಾಗದು. ನಾನು ಮಾಡಿದ ಸುಕೃತ ದುಷ್ಕೃತ ಉಪಕಾರ ಅಪಕಾರ ಇವುಗಳನ್ನನುಸರಿಸಿಯೇ ಹೊಸ ಜನ್ಮವು ಸಿಗುವುದು. ಮನುಷ್ಯನೋ ಪ್ರಾಣಿಯೋ—ಪದೇ ಪದೇ ಕಷ್ಟಕ್ಕೆ ಗುರಿಯಾಗುವದನ್ನು ನಾವು ಕಾಣುತ್ತೇವೆ. ನಮ್ಮನ್ನು ದುಃಖ ಸಾಗರದಲ್ಲಿ ಮುಳುಗಿಸಿಬಿಟ್ಟು ಸತ್ತುಹೋದ ನಮ್ಮ ತಾಯಿಯೋ, ತಂದೆಯೋ, ಅಣ್ಣನೋ, ಇನ್ನೊಂದು ಜನ್ಮದಲ್ಲಿ ಆ ರೂಪವನ್ನು ತಾಳಬಹುದಲ್ಲವೇ? ಆದುದರಿಂದ ಕಷ್ಟದಲ್ಲಿರುವ ಮನುಷ್ಯನನ್ನಾಗಲಿ, ಪ್ರಾಣಿಯನ್ನಾಗಲಿ ನಾವು ಪ್ರೀತಿಯಿಂದ ಆದರಿಸಿ ಅವರ ನೋವನ್ನು ಕಳೆಯುವ ಪ್ರಯತ್ನ ಮಾಡಬೇಕು. ಯಾರಾದರೂ ಐಶ್ವರ್ಯವನ್ನೋ ಪದವಿಯನ್ನೋ ಹೊಂದಿದರೆ ನಾವು ಹೊಟ್ಟೇಕಿಚ್ಚು ಪಡುತ್ತೇವಲ್ಲವೇ? ಅದು ಏನು? ಅಜ್ಞಾನ! ಒಂದು ವೇಳೆ ನಮಗೆ ಬಹು ಪ್ರಿಯರಾಗಿದ್ದು ಅಕಾಲದಲ್ಲಿ ಸತ್ತುಹೋದವರೇ ಹೊಸ ಜನ್ಮವನ್ನೆತ್ತಿ ತಾವು ಮೊದಲು ಮಾಡಿದ ಸುಕೃತಗಳ ಕಾರಣದಿಂದ ಆ ಒಳ್ಳೆಯ ಪದವನ್ನೋ ಐಶ್ವರ್ಯವನ್ನೋ ಹೊಂದಿರಬಹುದಲ್ಲವೇ?' ಈ ರೀತಿಯಾಗಿ ಮುಕುಂದನು ತನ್ನೊಳಗೆ ತಾನೆ ಜಿಜ್ಞಾಸೆ ಮಾಡಿಕೊಂಡನು.

ಈ ಗೀತೆಯ ಶ್ಲೋಕವನ್ನು ಇದಕ್ಕೆ ಮೊದಲು ಎಷ್ಟೋಸಲ ಓದಿದುದುಂಟು. ಹೊಸದೇನೂ ಅಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ನಾವು ಓದುವ ಶ್ಲೋಕವೋ, ಹಾಡೋ, ಗದ್ಯವೋ ಮೊದಲೆಂದೂ ಇಲ್ಲದ ರೀತಿಯಲ್ಲಿ ಸ್ಪಷ್ಟವಾಗಿ ತಿಳಿದು ಅದರ ಅರ್ಥವು ಹೊಳೆಯುವುದು. ಭಗವದ್ಗೀತೆಯ ಈ ಶ್ಲೋಕವು ಮುಕುಂದನಿಗೆ ಹಿಂದೆಂದೂ ಅನಿಸದ ಸ್ಪಷ್ಟತೆಯಿಂದ ಇಂದು ಬೆಳಗಿತು.

## ೧೧

‘ಅಪ್ಪಾ ! ಮುಕುಂದಾ ! ಮಗು! ಏಳುತ್ತೀಯಾ ! ಊಟಕ್ಕೆ ಬರುತ್ತೀಯಾ ?’ ಎಂದು ತಾಯಿಯು ಅಡಿಗೆಯ ಮನೆಯಿಂದ ಕರೆದಳು.

‘ಅವಳ ಕಂಠವೆ. ಅದರಲ್ಲಿ ಸಂದೇಹವೇ ಇಲ್ಲ. ಇದೇನು ಆಶ್ಚರ್ಯ? ಇಷ್ಟು ದಿನಗಳು ಇವಳು ಸತ್ತುಹೋಗಿದ್ದಳೆಂದು ತಿಳಿದುಕೊಂಡಿದ್ದೇನೆ ? ಇಗೋ ಅವಳ ಕಂಠ! ಅವಳೇ ! ನಾನು ಊರು ಊರು ಸುತ್ತಿದ್ದು ಕಷ್ಟಪಟ್ಟಿದು ಎಲ್ಲವೂ ಬರಿ ಭ್ರಾಂತಿ. ಅಮ್ಮನು ಸತ್ತುಹೋಗಲಿಲ್ಲ. ಜೀವದೊಡನೆ ಇರುವಳು. ನಾನೂ ಶಾಲೆಯಲ್ಲಿಯೇ ಇನ್ನೂ ಓದುತ್ತಿದ್ದೇನೆ. ಇನ್ನು ಒಂದು ದಿನವಾದರೂ ಕೊಳೆಯ ನೀರನ್ನು ಕುಡಿಯಲಾರೆನು. ನನಗೆ ಕಾಲರಾ ಬಂದರೂ ಅವಳನ್ನು ನನ್ನ ಬಳಿ ಬರಗೊಳಿಸುವುದಿಲ್ಲ. ಅವಳಿಗೂ ರೋಗವು ಸೋಕುವದನ್ನು ನಾನು ನೋಡಿಕೊಂಡಿರಲಾರೆನು. ಆಯ್ಯೋ— ಇದೇನು ಸಂತೋಷ. ಅಮ್ಮನು ಜೀವದೊಡನೆ ಈಗಲೂ ಇರುವಳಲ್ಲ!

ಎಲ್ಲಿಯೋ ಕೊಡವನ್ನು ತೆಗೆದುಕೊಂಡು ಅವಸರವಾಗಿ ಹೋಗುತ್ತಿದ್ದಾಳೆ. ನನ್ನನ್ನೂ ಬಾ ಎಂದು ಕರೆಯುವಂತೆ ಕೈಮಾಡುವಳು. ಅವಸರವಾಗಿ ಹೋಗುತ್ತಿದ್ದಾಳೆ. ಕೇರಿಯೊಳಕ್ಕೆ ಓಡುತ್ತಾಳೆ. ಅಯ್ಯೋ-ನಿಲ್ಲಮ್ಮ ನಿಲ್ಲು-ಏತಕ್ಕೆ ಓಡುವೆ ? ಅಗೋ ಕೇರಿಯೊಳಕ್ಕೆ ಹೋಗಿಬಿಟ್ಟಳು ! ಅಲ್ಲಿರುವವರೆಲ್ಲರೂ ಸುತ್ತಿಕೊಂಡು ಹೊಡೆಯುತ್ತಿರುವರು. ಬಂದೆಯಾ ಕೇರಿಯೊಳಗೆ ? ಬ್ರಾಹ್ಮಣತಿಗೆ ಇಲ್ಲೇನು ಕೆಲಸ ? ಎಂದು ಕಾಡುಮೃಗಗಳಂತೆ ಕೂಗಿಕೊಂಡು ದೊಣ್ಣೆಗಳನ್ನು ತೆಗೆದುಕೊಂಡು ಮನಸ್ಸು ಬಂದಂತೆ ಹೊಡೆದು ಮೂಳೆಯನ್ನು ಚೂರು ಚೂರು ಮಾಡುತ್ತಿರುವರು. ಹಗ್ಗದ ಮಂಚದಮೇಲೆ ಇರಿಸಿ ನಾಲ್ಕು ಮಂದಿ ಎತ್ತಿಕೊಂಡು ಬಂದು ಆಸ್ಪತ್ರೆಯಲ್ಲಿ ಹಾಕುವರು. ಅಯ್ಯೋ ! ಅಮ್ಮಾ !

ಇದೇನೂ ಇಲ್ಲ. ಏನು ಬುದ್ಧಿಭ್ರಮಣ ? ಪಾಪ ! ಕಾಲರಾ ಬಂದು ಹಾಸಿಗೆಯಿಂದ ಏಳದೆ ಅಲ್ಲಿಯೇ ಇರುವಳು. ಮೈಯಲ್ಲಿ ಹೇಳಲಸಾಧ್ಯವಾದ ಯಾತನೆ, ಕೈಕಾಲು ಎಳೆತ. ಹೊಟ್ಟೆಯಲ್ಲಿ ಸಹಿಸಲಾಗದಷ್ಟು ನೋವು. ಅಯ್ಯೋ ! ಅಮ್ಮನನ್ನು ಎತ್ತಿಕೊಂಡು ಹೋಗುವರಲ್ಲ. ನನ್ನಿಂದ ಏಳಲಾಗದೆ ಇದೆಯೆ. ‘ಮುಗಿದುಹೋಯಿತು’ ಎನ್ನುವರಲ್ಲಾ ! ಏನು? ಅಮ್ಮನಿಗೆ

ಏನು? ಏತಕ್ಕೆ ಮಾತನಾಡದೆ ಇರುವಳು? ಸತ್ತೇಹೋಗಿಬಿಟ್ಟಳೆ? ನನಗೆ ಇನ್ನು ತಾಯಿಯಿಲ್ಲವೆ? ಅಯ್ಯೋ ಏನು ಮಾಡಲಿ!"

ಬೆಚ್ಚಿ ಬಿದ್ದು ಮುಕುಂದನು ಕಣ್ಣು ತೆರೆದು ಎದ್ದನು. ಕುರ್ಚಿಯಲ್ಲಿಯೇ ನಿದ್ದೆಹೋಗಿ ಬಿಟ್ಟಿದ್ದುದರಿಂದ ಭಗವದ್ಗೀತೆ ಪುಸ್ತಕವು ಕೆಳಗೆ ಬಿದ್ದುಹೋಗಿತ್ತು. ಕಮಲಾಪುರದ ಆಸ್ಪತ್ರೆಯಲ್ಲಿರುವುದು ಮಾತ್ರ ನಿಜವೆಂದೂ ಮಿಕ್ಕುದೆಲ್ಲವೂ ಕನಸೆಂದೂ ತೀರ್ಮಾನ ಮಾಡಿದನು. ಹಾಸಿಗೆಯಲ್ಲಿ ಮಲಗಿಕೊಂಡು ನಿದ್ದೆಹೋದನು.

## ೧೨

ಪೂಪಾಯಿಯ ಗಾಯಗಳು ಮಾಯ್ದು ಕೈಮೂಳೆಯು ಗುಣಹೊಂದುವುದಕ್ಕೆ ಒಂದು ತಿಂಗಳ ಮೇಲೆ ಆಯಿತು. ಬಹು ವಿಶ್ವಾಸದಿಂದಲೂ ಆದರದಿಂದಲೂ ಮುಕುಂದನು ಮದ್ದು ಹಾಕಿ ನೋಡುತ್ತ ಬಂದನು.

ಮುಕುಂದನು 'ತಮ್ಮಾ, ಮಾರಿ, ನಾನೊಂದು ಹೇಳುತ್ತೇನೆ, ಕೇಳುತ್ತೀಯಾ' ಎಂದನು.

ಮಾರಿ 'ಹೇಳಿ ಬುದ್ಧಿ' ಎಂದನು.

'ನಾವು ಸಣ್ಣ ಹುಡುಗರಾಗಿದ್ದಾಗ್ಯೆ ನನ್ನನ್ನು ಒಂದು ದೊಡ್ಡ ಕೋತಿಯ ಕೈಯಿಂದ ಕಾಪಾಡಿದೆಯಲ್ಲವೆ? ಆಗ ನನ್ನ ತಾಯಿಯು ಅದಕ್ಕಾಗಿ ನಿನ್ನನ್ನು ಹೊಡೆದು ಓಡಿಸಿದಳಲ್ಲವೆ?'

'ಏನೋ ನಡೆಯಿತು. ಆ ಮಾತಾಗಿ ಬಹಳ ದಿನಗಳಾಯಿತು ಸ್ವಾಮಿ. ಈಗ ನನ್ನ ಹೆಂಡತಿಯ ಜೀವವನ್ನು ಕಾಪಾಡಿ ಕೊಟ್ಟಿರುವೆ. ನನ್ನ ಮನೆಯನ್ನು ಬೆಳಗಿಸಿರುವೆ ಬುದ್ಧಿ.'

'ಮಾರಿ, ಸತ್ತು ಹೋದವರು ಮತ್ತೆ ಹುಟ್ಟುವರೆಂದು ನಿನಗೆ ಗೊತ್ತೆ? ಒಳ್ಳೆಯದು ಕೆಟ್ಟದನ್ನು ಮಾಡಿದುದಕ್ಕೆ ಫಲಗಳನ್ನು ಅನುಭವಿಸಲು ಮತ್ತೆ ಜನ್ಮವೆತ್ತುವುದು ಗೊತ್ತೆ?'

'ಹೌದು ಬುದ್ಧಿ! ಹಾಗೆಯೇ ಹೇಳಿಕೊಳ್ಳುತ್ತಾರೆ. ಈಶ್ವರನು ಎಲ್ಲವನ್ನೂ ನೋಡಿಕೊಳ್ಳುವನು. ಯಾರನ್ನೂ ಬಿಡನು. ಅವನನ್ನು ಮೀರಿರುವವರು ಯಾರು?'

'ನನ್ನ ತಾಯಿಯು ನಿನಗೆ ಮಾಡಿದುದು ದೊಡ್ಡ ತಪ್ಪು. ಅದಕ್ಕಾಗಿ ಅವಳೀಗ ಬೇರೆ ಜನ್ಮವೆತ್ತಿ ಕಷ್ಟಪಡುತ್ತಾಳೆಂದೇ ಭಾವಿಸುತ್ತೇನೆ. ಅದಕ್ಕಾಗಿಯೇ ಒಂದು ಹಬ್ಬ ಇರಬೇಕೆಂದು ತೀರ್ಮಾನಿಸಿರುವೆನು.'

'ಹೇಳಿ ಸ್ವಾಮಿ' ಎಂದನು ಮಾರಿ.

'ಈಗ ನಿಮ್ಮೆಲ್ಲರಿಗೂ ಬಹು ಕಷ್ಟ ಕಾಲ. ವೀರಕ್ಕಾನು. ನೀನೂ ನಿನ್ನ ಹೆಂಡತಿಯೂ ನನ್ನ ಮನೆಯಲ್ಲಿ ನನ್ನೊಡನೆ ಇರಬೇಕು. ನನಗೆ ಬಂಧುಗಳಿಲ್ಲ. ನೀನೂ ಪೂವಾಯಿಯೂ ನನಗೆ ತಮ್ಮ ತಂಗಿಯರಂತೆ ಇರಬೇಕು' ಎಂದನು ಮುಕುಂದನು.

ಮಾರಿಗೆ ಏನೂ ಬಗೆ ಹರಿಯಲಿಲ್ಲ. 'ಸ್ವಾಮಿ, ನಾವು ಬುದ್ಧಿಯವರಿಗೆ ತಮ್ಮ ತಂಗಿ ಹೇಗಾಗುವೆವು? ಆಗದು ಬುದ್ಧಿ' ಎಂದನು ಮಾರಿ.

ಅದಕ್ಕೆ ಮುಕುಂದನು: 'ಮಾರಿ ಅದೆಲ್ಲ ಸರಿಯಲ್ಲ. ನಿಮ್ಮನ್ನು ಹೀಗೆ ನಾಯಿ ಬಾಳಿನಲ್ಲಿ ಇತರರು ಇಟ್ಟಿರುವುದು ದೊಡ್ಡ ಪಾಪ. ಅವಕ್ಕಾಗಿಯೂ ಈ ಹಬ್ಬವನ್ನು ನಿಶ್ಚಯಿಸಿರುವೆನು. ನೀನು ಆಕ್ಷೇಪಿಸಬಾರದು' ಎಂದನು.

'ಸ್ವಾಮಿ'

'ಸತ್ತರೆ ಹೊಸ ಜನ್ಮವುಂಟೆಂದು ಹೇಳಿದೊಲ್ಲವೆ? ನಿನ್ನ ಹೆಂಡತಿಯನ್ನು ನೋಡಿದುದು ಮೊದಲು, ಏನು ಕಾರಣವೊ, ಅವಳು ನನ್ನ ತಾಯಿಯೆಂದೇ ತೋರುತ್ತಲಿದೆ.'

'ಸ್ವಾಮಿ, ನನಗೆ ಯಾವುದೂ ತಿಳಿಯಲೊಲ್ಲದು.'

'ತಮ್ಮಾ, ತಿಳಿಯದಿದ್ದರೆ ಹೋಗಲಿ. ನಾನು ಹೇಳುವುದಕ್ಕೆ ನೀನು ಅಡ್ಡ ಹೇಳಬಾರದು. ನನ್ನ ಜೊತೆಗೆ ನೀವಿರಬೇಕು.'

'ನನ್ನ ತಾಯಿಯು ಹೇಗೆ ಒಪ್ಪಿಯಾಳು?'

'ನಾನು ಸಮಾಧಾನ ಮಾಡುವೆನು' ಎಂದನು ಮುಕುಂದನು.

'ಅವಳು ಒಪ್ಪಿದರೆ ಆಗಬಹುದು ಬುದ್ಧಿ' ಎಂದು ಮಾರಿ ಹೇಳಿದನು.

ಹೇಗೋ ಮುಕುಂದನು ಹೇಳಿ ಕುಪ್ಪಾಯಿಯ ಸಮ್ಮತಿಯನ್ನು ಪಡೆದನು. ಅದು ಮೊದಲು ಮುಕುಂದನು ಊರಿಗೆ ಹೊಲೆಯನಾದನು. ಅವನ ಮನಸ್ಸು ಶಾಂತತೆಯನ್ನು ಹೊಂದಿತು.

———

# ೧೧. ರಾಯಪ್ಪ

ರಾಯಪ್ಪನು ನಮ್ಮ ಪತ್ರಿಕೆಯನ್ನು ಮಾರುವ ಹುಡುಗರಲ್ಲೊಬ್ಬನು. ಕ್ರೈಸ್ತ ಮತದವನು. ಆದರೆ ಅವನ ಪದ್ಧತಿ ರಾತ್ರಿಯಾದ ಕೂಡಲೆ ಒಂದು ವಿನಾಯಕನಿಗೆ ನಮಸ್ಕಾರಮಾಡಿ ಅಲ್ಲಿಯೇ ವಿಗ್ರಹದ ಹಿಂದುಗಡೆ ಮಲಗಿ ನಿದ್ದೆ ಹೋಗುವುದು. ಬೇರೆ ಒಳ್ಳೆಯ ಸ್ಥಳವನ್ನು ಹೇಳಿದರೂ ಎಲ್ಲಿಯೂ ಮಲಗುವುದಿಲ್ಲ.

"ಏತಕ್ಕೆ ಹೀಗೆ ಮಾಡುವೆ?" ಎಂದು ಕೇಳಿದರೆ ನಗುವನು. ಬಹಳ ಒತ್ತಾಯ ಪಡಿಸಿದರೆ "ಅದರಿಂದಲೇ ನನ್ನ ಮನಸ್ಸಿಗೆ ನೆಮ್ಮದಿ" ಎನ್ನುವನು.

"ನಿಮ್ಮ ಅಪ್ಪ ಕ್ರೈಸ್ತ ಮತದವನಾಗಿದ್ದನೆ, ಅಥವಾ ನೀನು ಆ ಮತಕ್ಕೆ ಸೇರಿದೆಯಾ?" ಎಂದು ಕೆಲವರು ಕೇಳುವರು. "ನಾನೇ ಸೇರಿದೆ" ಎಂದು ಅಹಂಕಾರವಾಗಿ ಹೇಳಿ ಪತ್ರಿಕೆಯನ್ನು ಮಾರಲು ಓಡಿಹೋಗುವನು.

*　*　*

ಕೃಷ್ಣಗಿರಿ ತಾಲ್ಲೂಕು ಪಂಚಪಟ್ಟಿ ಗ್ರಾಮದಲ್ಲಿ ಶ್ಯಾನುಭೋಗರಾದ ಕಂದಸ್ವಾಮಿ ಅಯ್ಯರಿಗೆ ಮಗು ಹುಟ್ಟಿದ ಆರನೆಯ ತಿಂಗಳು; ಅವರ ಹೆಂಡತಿ ಊರ ಹೊರಗಿದ್ದ 'ಪಿಶಾಚಿ ಹಳ್ಳ'ದಲ್ಲಿ ಕಾಲು ತೊಳೆದುಕೊಂಡು ಹತ್ತುವಾಗ ಕಾಲುಜಾರಿ "ಅಯ್ಯಯ್ಯೋ! ಮಗುವಿನ ಗತಿಯೇನು?" ಎಂದು ಅರಚಿಕೊಳ್ಳುತ್ತ ಮುಳುಗಿ ಮೃತಿಹೊಂದಿದಳು. ಕಂದಸ್ವಾಮಿ ಕೆಲವು ವರ್ಷಗಳಾದಮೇಲೆ ಮತ್ತೊಂದು ಮದುವೆಯನ್ನು ಮಾಡಿಕೊಂಡರು. ಕೆಲವು ಕಾಲ ಸರಿಯಾಗಿ ನಡೆದು ಬಂತು. ಅನಂತರ ಹುಡುಗನಾದ ವೆಂಕಟ ರಾಯನಿಗೂ ಮಲತಾಯಿಗೂ ಸರಿಹೋಗಲಿಲ್ಲ. ಕಾರಣವಿಲ್ಲದೆ ದ್ವೇಷವು ಬೆಳೆಯುತ್ತ ಹೋಯಿತು. ಹೇಳಿದಂತೆ ಕೇಳುವುದಿಲ್ಲವೆಂದು ಆಕೆ ಹೊಡೆಯು

ವಳು. ಅಳುತ್ತಾ ತಂದೆಯ ಬಳಿ ಹೋಗುವನು. ಅಳುವದನ್ನು ನೋಡಿ ಅವರೂ ಹೊಡೆಯುವರು. "ನೀನು ನಾಶವಾಗಿ ಹೋಗು" ಎನ್ನುವರು. ಮಗುವಿಗೆ ಇದೊಂದೂ ಅರ್ಥವಾಗಲಿಲ್ಲ. ಬೀದಿಯ ನಾಯಿಯನ್ನು ಯಾರಾದರೂ ಹೊಡೆದೋ ಕಲ್ಲೆಸೆದೋ ಅದು ಓಡಿಹೋಗುವುದನ್ನು ಕಂಡರೆ ವೆಂಕಟರಾಯನು, "ಆ ನಾಯಿ, ಪಾಪ, ನನ್ನ ಹಾಗೆಯೇ ಕಷ್ಟಪಡುತ್ತೆ" ಎನ್ನುತ್ತ ಅದನ್ನು ನೋಡುತ್ತ ನಿಲ್ಲುವನು. ವೆಂಕಟರಾಯನಿಗೆ ಏಳು ವರ್ಷಗಳಾದುವು. ಶಾಲೆಗೆ ಹೋಗಿಬರುತ್ತಿದ್ದ. ಆದರೆ ಅವನಿಗೆ ಓದಿನಲ್ಲಿ ಮನಸ್ಸಿಲ್ಲ. ಉಪಾಧ್ಯಾಯರು ಹೆದರಿಸಿ ನೋಡಿದರು. ಸ್ವಲ್ಪ ಹೊಡೆದೂ ನೋಡಿದರು. "ಶುದ್ಧ ದಡ್ಡ—ಒಂದಕ್ಕೂ ಪ್ರಯೋಜನವಿಲ್ಲ" ಎಂದು ತೀರ್ಮಾನಿಸಿ ಅವನು ಹೋಗುವ ದಾರಿಗೆ ಬಿಟ್ಟರು.

ಒಂದು ದಿನ ಸವರಿ ಮುತ್ತು ಎನ್ನುವ ಮತ್ತೊಬ್ಬ ಶಾಲೆಯ ಹುಡುಗ ವೆಂಕಟರಾಯನನ್ನು ತನ್ನ ಮನೆಗೆ ಕರೆದುಕೊಂಡು ಹೋದ. ಮನೆಗೆ ಹೋಗುವಾಗ ಆ ಹುಡುಗನ ತಾಯಿಯೂ ಬೀದಿ ಬಾಗಿಲ ಬಳಿ ಕಾದಿದ್ದಳು. ಮಗು ಬಂದಕೂಡಲೆ "ಮುತ್ತು, ಬಂದೆಯಾ?" ಎಂದು ಅವನನ್ನು ಅಪ್ಪಿ ಮುತ್ತಿಟ್ಟು ಕೈಯನ್ನು ಹಿಡಿದುಕೊಂಡು ಮನೆಯೊಳಕ್ಕೆ ಕರೆದುಕೊಂಡು ಹೋದಳು.

"ಇವನು ಯಾರು, ನಿನ್ನ ಜತೆಯಲ್ಲಿ?" ಎಂದು ಕೇಳಿದಳು.

"ನನ್ನೊಂದಿಗೆ ಓದುವ ಹುಡುಗ. ರ್ಯಾಸುಭೋಗರ ಮಗ. ಸುಮ್ಮನೆ ಕರೆದುಕೊಂಡು ಬಂದೆ. ಇವನಿಗೆ ತಿಂಡಿ ಕೊಡು" ಎಂದನು.

ಸವರಿ ಮುತ್ತುವಿನ ಮನೆಯಲ್ಲಿ ಕಂಡದ್ದೆಲ್ಲವೂ ವೆಂಕಟರಾಯನಿಗೆ ಆಶ್ಚರ್ಯವಾಗಿತ್ತು. ಎರಡು ಮೂರು ದಿನಗಳು ಅವನು ಸವರಿಯೊಡನೆ ಅವರ ಮನೆಗೆ ಹೋಗಿ ಬಂದನು.

"ಸವರಿಯ ತಾಯಿಯ ಹಾಗೆ ಏತಕ್ಕೆ ನನ್ನ ತಾಯಿಯು ಇರುವುದಿಲ್ಲ. ಸವರಿಯ ತಾಯಿಯ ಹಾಗೆ ನನಗೂ ಒಂದು ತಾಯಿ ಇರಬಾರದೆ?" ಎಂದು ಯೋಚಿಸತೊಡಗಿದನು. ಅನಂತರ ಒಂದು ದಿನ ಏಕಾಂತದಲ್ಲಿ "ಸವರಿ ತಾಯಂದಿರು ಹೇಗೆ ಉಂಟಾಗುತ್ತಾರೆ? ನಿನಗೆ ನಿಮ್ಮ ಅಮ್ಮ ಹೇಗೆ ಸಿಕ್ಕಿದಳು?" ಎಂದು ಕೇಳಿದ.

ಸವರಿ ಮುತ್ತುವಿಗೆ ಉತ್ತರ ಹೇಳಲಾಗಲಿಲ್ಲ. ಮಕ್ಕಳಿಗೆ ತಾಯಂದಿರು ಹೇಗೆ ಬಂದು ಸೇರುತ್ತಾರೆ ಎನ್ನುವುದು ಅವನಿಗೆ ತಿಳಿಯಲಿಲ್ಲ. ಕೊನೆಯಲ್ಲಿ "ದೇವರು ಕೊಡುತ್ತಾನೆ. ನಿನಗೆ ಏತಕ್ಕೆ ಭಗವಂತನು ಒಳ್ಳೆಯ ತಾಯಿಯನ್ನು ಕೊಡಲಿಲ್ಲ. ಅವನಿಗೆ ನಿನ್ನ ಮೇಲೆ ಕೋಪವೆಂದು ತೋರುತ್ತದೆ" ಎಂದನು.

ಅನಂತರ ಅವರೊಂದಿಗೆ ಸವರಿಯ ತಾಯಿಯೂ ಬಂದು ಸೇರಿದಳು.

"ಅಮ್ಮಾ! ಈ ಹುಡುಗನ ತಾಯಿ ಇವನನ್ನು ತುಂಬ ಹೊಡೆಯುತ್ತಾಳಂತೆ. ಏತಕ್ಕಮ್ಮಾ ಹೀಗೆ? ಪಾಪ! ಇವನಿಗೆ ನನಗೆ ಇರುವ ಹಾಗೆ ಒಳ್ಳೆಯ ತಾಯಿ ಸಿಕ್ಕಬಾರದಾಗಿತ್ತೆ?" ಎಂದನು ಸವರಿ.

ಮೇರಿಯಮ್ಮ ನಕ್ಕು ವೆಂಕಟರಾಯನನ್ನು ನೋಡಿ "ನೀನು ಒಳ್ಳೆಯ ಹುಡುಗನಾಗಿದ್ದರೆ ನಿನ್ನ ತಾಯಿಯೂ ನಿನ್ನನ್ನು ಹೊಡೆಯಲಾರಳು" ಎಂದಳು. ಹೀಗೆ ಹೇಳುತ್ತ ತನ್ನ ಮಗನ ಮುಖವನ್ನು ಸವರುತ್ತ ನೆತ್ತಿಯಮೇಲೆ ಒಂದು ಮುತ್ತನ್ನಿತ್ತಳು.

"ನನಗೆ ನನ್ನ ತಾಯಿ ಯಾವಾಗ ಬಂದಳು? ಸವರಿಗೆ ನೀವು ಯಾವಾಗ ಬಂದಿರಿ" ಎಂದು ವೆಂಕಟರಾಯನು ಕೇಳಿದನು.

ಮೇರಿಯಮ್ಮನು ಮತ್ತೊಮ್ಮೆ ದೊಡ್ಡ ನಗು ನಗುತ್ತ "ಪಾಪ! ಹುಡುಗನಿಗೆ ಏನೂ ತಿಳಿಯದಂತೆ ಕಾಣುತ್ತದೆ. "ಅಪ್ಪಾ! ನಿನ್ನ ತಾಯಿ ನೀನು ಸಣ್ಣ ಮಗುವಾಗಿದ್ದಾಗಲೆ "ಪಿಶಾಚಿ ಹಳ್ಳ"ದಲ್ಲಿ ಕಾಲುಜಾರಿ ಮುಳುಗಿ ಸತ್ತುಹೋದಳು. ನಿನ್ನ ತಂದೆ ಮತ್ತೆ ಮದುವೆ ಮಾಡಿಕೊಂಡರು. ನಾನೂ ತಾಂಬೂಲಕ್ಕೆ ಹೋಗಿದ್ದೆ. ನಿನ್ನನ್ನು ಹೊಡೆಯುವುದು ನಿನ್ನ ತಾಯಿಯಲ್ಲ. ನಿನ್ನ ತಾಯಿ ಸತ್ತುಹೋಗಿರುವಳು" ಎಂದಳು.

ವೆಂಕಟರಾಯನು ಕಣ್ಣುಗಳನ್ನು ಅರಳಿಸಿ ನೋಡುತ್ತ "ನನ್ನ ಅಮ್ಮ ಈಗ ಎಲ್ಲಿರುವಳು?" ಎಂದು ಕೇಳಿದನು.

"ಅಪ್ಪಾ! ಮಗು, ನೀನು ದೇವರನ್ನು ಬೇಡಿಕೊ. ನಿನ್ನ ಅಮ್ಮ ನಿನ್ನ ಬಳಿ ಬರುವಳು" ಎಂದಳು.

"ದೇವರು ಯಾರು ? ಅವನನ್ನು ಎಲ್ಲಿ ಬೇಡಲಾಗುವುದು ?" ಎಂದು ವೆಂಕಟರಾಯನು ಕೇಳಿದನು.

"ಅಪ್ಪಾ - ನೋಡು, ಆ ಚಿತ್ರವನ್ನು" ಎಂದು ಹೇಳಿ ಗೋಡೆಯ ಮೇಲೆ ಎತ್ತರವಾಗಿ ನೇತುಹಾಕಿದ್ದ ಏಸುಕ್ರಿಸ್ತನ ತಾಯಿಯಾದ ಮೇರಿಯ ಚಿತ್ರವನ್ನು ತೋರಿಸಿದಳು.

ವೆಂಕಟರಾಯನು ಬಹಳ ಹೊತ್ತು ಆ ಚಿತ್ರವನ್ನೇ ನೋಡುತ್ತ ನಿಂತನು. ಆ ಚಿತ್ರವು ಅನನಿಗೆ ಒಂದು ಹೊಸ ಜೀವನವನ್ನು ಕೊಟ್ಟಿತು. ಅನಂತರ ತನ್ನ ಮನೆಯ ಕಡೆ ಹೊರಟನು. ದಾರಿಯಲ್ಲಿ (ಮೇರಿ) ಮಾತೆಯ ಗುಡಿ. ಅಲ್ಲಿ ಕಿಟಕಿಯ ಮೂಲಕ ಒಳಕ್ಕೆ ಇಣಕಿ ನೋಡಿದ. ಅಲ್ಲಿಯೂ ಗೋಡೆಯ ಮೇಲೆ ಒಂದು ದೊಡ್ಡ ಚಿತ್ರವಿತ್ತು. ಅದನ್ನೇ ನೋಡುತ್ತ ನಿಂತನು. ಸ್ವಲ್ಪ ಹೊತ್ತಿನಲ್ಲಿ ಆ ಚಿತ್ರವು ಜೀವಕಳೆಯಿಂದ ತುಂಬಿ, ಗೋಡೆಯ ಮೇಲಿಂದ ಪ್ರೀತಿಯೇ ರೂಪ ತಾಳಿದಂತೆ ಒಂದು ಹೆಂಗಸು ಇಳಿದಳು. ಮರುಕ್ಷಣದಲ್ಲಿ ಅವಳು ಪಕ್ಕದಲ್ಲಿ ನಿಂತಳು. ತನ್ನ ತಾಯಿಯೇ ತಾನು ಬೇಡಿಕೊಂಡಂತೆ ಬಂದಳೆಂದು ಭಾವಿಸಿ ಅವನ ಅಂತ ರಂಗವು ಉಕ್ಕಿಬಂತು.

"ಅಪ್ಪಾ ಮಗೂ ವೆಂಕಟರಾಯಾ" ಎಂದಳು. ಆಹಾ! ಆ ಧ್ವನಿಯೋ! ತನ್ನ ಮುಖವನ್ನು ಆಕೆ ತನ್ನ ಕೈಯಿಂದ ಸವರುತ್ತಿದ್ದ ಹಾಗೆಯೇ ಅವನು ಪರವಶನಾದನು. ವೆಂಕಟರಾಯನು ತನ್ನ ತಾಯಿಯನ್ನು ಪಡೆದನು. ತಾಯಿ ಅವನನ್ನು ಆಲಂಗಿಸಿ ಮುದ್ದಿಟ್ಟಳು. "ಬಾ! ನನ್ನ ಜತೆಯಲ್ಲಿ" ಎಂದು ಎಲ್ಲಿಯೋ ಕರೆದುಕೊಂಡು ಹೋದಳು. ಇಬ್ಬರೂ ಬಹಳ ದೂರ ನಡೆದು ಹೋದರು. ಅಲ್ಲಲ್ಲಿ ನಿಂತು ಹುಡುಗನನ್ನು ಎತ್ತಿಕೊಂಡು, ಅಪ್ಪಿ, ಮುದ್ದಿಡುವಳು. "ಅಪ್ಪಾ! ಇಷ್ಟು ದಿನಗಳು ಕಷ್ಟಪಟ್ಟಿಯಾ - ಏತಕ್ಕೆ ನನ್ನನ್ನು ಈ ಮೊದಲೇ ಕರೆಯಲಿಲ್ಲ" ಎಂದಳು.

"ನನಗೆ ತಿಳಿಯಲಿಲ್ಲವಮ್ಮಾ" ಎಂದು ವೆಂಕಟರಾಯನು ಹೇಳಿ ಕಣ್ಣೀರಿಟ್ಟನು.

" ಅಳಬೇಡ " ಎಂದು ಹೇಳುತ್ತ ತನ್ನ ಸೀರೆಯ ಸೆರಗಿನಿಂದ ಅವನ ಕಣ್ಣನ್ನು ಒರೆಸಿದಳು.

ಬಹಳ ದೂರ ನಡೆದ ಮೇಲೆ ಪಾದ್ರಿ ಮನೆಯನ್ನು ಸೇರಿದರು. ತೋಟದಲ್ಲಿ ಅವನ ಮನೆ. ಗೇಟಿನ ಬಳಿ ವೆಂಕಟರಾಯನು ನಿಂತು " ಇದು ಚೆನ್ನಾಗಿದೆ ಸ್ಥಳ. ಇಲ್ಲೇ ತೋಟದಲ್ಲೇ ಕೂತು ಕಾಲವನ್ನು ಕಳೆಯೋಣ. ಮನೆಗೆ ಹೋದರೆ ಅವಳು ಬಯ್ಯುವಳು " ಎಂದನು. ಹೀಗೆ ಹೇಳಿ ಗೇಟಿನೊಳಗೆ ಹೋಗಲು ಯತ್ನಿಸಿದನು.

" ಅಲ್ಲಿ ಹೋಗಬೇಡ " ಎಂದು ತಾಯಿಯು ಅವನನ್ನು ತಡೆದಳು.

" ಏಕೆ-ಹೋದರೇನು ? " ಎಂದು ವೆಂಕಟರಾಯ ಕೇಳಿದನು.

" ಬೇಡ, ಯಾರಾದರೂ ಬರುವರು....ಬಂದರೆ ನಾನಿರಲು ಸಾಧ್ಯವಿಲ್ಲ. ನಾನು ಹೋಗಬೇಕಾಗುವುದು " ಎಂದಳು.

" ಬಾಯಾರಿಕೆಯಾಗಿದೆ. ತೋಟದ ಬಾವಿಯಲ್ಲಿ ನೀರು ಕುಡಿದು ಬರೋಣ ಬಾ. ಹೋಗೋಣ." ಎಂದು ಹೇಳುತ್ತ ಅವಳ ಕೈಯನ್ನು ಹಿಡಿದು ಗೇಟಿನೊಳಗೆ ಪ್ರವೇಶ ಮಾಡಿದನು.

" ಮಗು, ನೀನು ಯಾರು ? "ಎಂದು ಪಾದ್ರಿಯವರು ಬಾಯಿಂದ ಸಿಗರೇಟನ್ನು ತೆಗೆಯುತ್ತ ಕೇಳಿ ಸಮೀಪಕ್ಕೆ ಬಂದರು. ತಾಯಿಯು ಮಾಯವಾದಳು.

" ಅಮ್ಮಾ! ಅಮ್ಮಾ " ಎಂದು ಗಟ್ಟಿಯಾಗಿ ವೆಂಕಟರಾಯನು ಅರಚಿಕೊಂಡನು. " ಎಲ್ಲಿ ಹೋದೆ ? ಬಾ. ಬಾ, " ಎಂದು ಕೂಗುತ್ತ ಪಾದ್ರಿಯವರನ್ನು ಗಮನಿಸದೆ ತೋಟದ ಮರಗಳಡಿಯಲ್ಲಿ ಹುಡುಕಾಡಲು ಪ್ರಾರಂಭಿಸಿದನು. ಪಾದ್ರಿಯವರು ಹುಡುಗನನ್ನು ಸಮಾಧಾನಗೊಳಿಸಿ ಮನೆಯೊಳಕ್ಕೆ ಕರೆದುಕೊಂಡು ಹೋಗಿ ಕುಳಿತುಕೊಳ್ಳುವಂತೆ ಮಾಡಿ, ಕುಡಿಯಲು ನೀರು ಕೊಟ್ಟು " ಮಗು ! ನೀನು ಯಾರು " ಎಂದು ವಿಚಾರಿಸಿದರು. ಹುಡುಗನಿಗೆ ಒಳ್ಳೆಯ ಜ್ವರ.

* * *

"ಮಗು, ಏಸುನಾಥನೇ ನಮ್ಮನ್ನು ರಕ್ಷಿಸುವವನು. ಅವರೇ ದೇವರ ನೆಚ್ಚಿನ ಏಕಮಾತ್ರ ಪುತ್ರ. ಅಲ್ಲಿ ನೋಡು ಅವರ ಚಿತ್ರ. ಅವರು ನಿನ್ನನ್ನು ರಕ್ಷಿಸುವರು. ಅಲ್ಲಿ ನೋಡು ಅವರು ಈ ಲೋಕದಲ್ಲಿ ಪಡೆದ ಪವಿತ್ರವಾದ ತಾಯಿ ಶ್ರೀ ಮೇರಿಯಮ್ಮ. ಇವಳೇ ನಿನ್ನ ಮೇಲೆ ಪ್ರೀತಿಯನ್ನೂ ಕರುಣೆಯನ್ನೂ ತಾಳಿ ನಿನ್ನನ್ನು ಇಲ್ಲಿಗೆ ಕರೆತಂದು ಬಿಟ್ಟು ಹೋಗಿರುವಳು."

"ಇಲ್ಲ, ಇಲ್ಲ. ಅವಳು ನನ್ನ ತಾಯಿ ಮೇರಿಯಮ್ಮನಲ್ಲ. ಅವಳನ್ನು ನಾನು ಹುಡುಕಿ ಕಂಡು ಹಿಡಿಯುವೆನು. ಅವಳನ್ನು ಕಾಣದೆ ನಾನು ಇರಲಾರೆನು," ಎಂದು ಕೂಗಿಕೊಳ್ಳುತ್ತ ಹೊರಕ್ಕೆ ಓಡಿಹೋದನು. ಕತ್ತಲೆ. ಪಾದ್ರಿಯವರು ಹಿಂಬಾಲಿಸಲಿಲ್ಲ.

ಇಲ್ಲಿ ಅಲ್ಲಿ ಅಲೆದು ಬಂಡಿಪೇಟೆಯ ವಿನಾಯಕನ ಮಂಟಪವನ್ನು ಸೇರಿದ. ಅಲ್ಲಿ ಯಾರೂ ಇರಲಿಲ್ಲ. ಅದು ಸಂತೆಯ ದಿನವಲ್ಲ, ವಿನಾಯಕನ ಮುಂದೆ ಯಾರೋ ಹತ್ತಿಸಿಟ್ಟಿದ್ದ ಒಂದು ಸಣ್ಣ ದೀಪ ಮಿನುಗುತ್ತಿತ್ತು. ಅಲ್ಲಿಗೆ ಹೋಗಿ ವೆಂಕಟರಾಯನು ಕೆಳಕ್ಕೆ ಬಿದ್ದನು. "ಅಮ್ಮಾ! ಅಮ್ಮಾ!" ಎಂದು ಮೆತ್ತಗೆ ಹೇಳುತ್ತ ಬಿದ್ದಿದ್ದನು. ಅನಂತರ ನಿದ್ದೆ ಬಂದಿತು. ನಡು ರಾತ್ರಿಯಲ್ಲಿ ಇದ್ದಕ್ಕಿದ್ದ ಹಾಗೆ ಎದ್ದು ಕೂತುಕೊಂಡನು. ತಾಯಿಯೂ ಪಕ್ಕದಲ್ಲಿ ಕೂತಿದ್ದಳು.

"ಅಮ್ಮಾ" ಎಂದು ಗಟ್ಟಿಯಾಗಿ ಅವಳನ್ನು ಅಪ್ಪಿಕೊಂಡನು. "ನನ್ನನ್ನು ಬಿಟ್ಟು ಹೋಗಲಾರೆಯಲ್ಲ" ಎಂದು ಬಿಕ್ಕಿ ಬದರಿದನು.

"ಇಲ್ಲ, ಇಲ್ಲ" ಎಂದು ಅವಳು ಇವನ ಮುಖವನ್ನು ಸವರುತ್ತ ಮುದ್ದಿಟ್ಟಳು. "ನೀನು ನಿತ್ಯವೂ ಇಲ್ಲಿಯೇ ಬಂದು ಮಲಗು. ನಾನು ಬರುವೆನು. ಹಗಲಿನಲ್ಲಿ ನಾನು ಬರಲಾಗದು," ಎಂದಳು. ಬೆಳಗಾಗುವುದರೊಳಗಾಗಿ ಮರೆಯಾದಳು.

ಅಂದು ಮೊದಲು ವೆಂಕಟರಾಯನು ಬಂಡಿಪೇಟೆಯ ಗಣೇಶನ ಮಂಟಪದಲ್ಲೇ ಮಲಗುವುದು ಪದ್ಧತಿ. ಅವನ ಮುಖದಲ್ಲಿ ಒಂದು ಹೊಸ ಹೊಳಪು ಕಂಡಿತು. ಹಗಲೆಲ್ಲಾ ಯದ್ವಾತದ್ವಾ ಹಾಡಿಕೊಳ್ಳುತ್ತ ತಿರುಗುವನು. ಹುಡುಗನಿಗೆ ಹುಚ್ಚು ಹಿಡಿಯಿತೆಂದು ಊರಿನವರು ಕನಿಕರಿಸಿದರು.

ವೆಂಕಟರಾಯನಿಗಾದರೋ ಆನಂದ ಸಾಗರದಲ್ಲಿ ಮಿಂದು ಆಟವಾಡುತ್ತ ತಿರುಗುವನು. ರಾತ್ರಿಯಾದರೆ ಬಂಡಿಪೇಟೆಯ ವಿನಾಯಕನನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ನಮಸ್ಕಾರ ಹಾಕಿ ಅಲ್ಲಿಯೇ ಮಲಗುವನು. ತಪ್ಪದೆ ತಾಯಿ ಬರುವಳು. ಹೀಗೆಯೇ ಅನೇಕ ದಿನಗಳು ಕಳೆದುವು.

* * *

"ಅಯ್ಯೋ ಪಾಪ! ಈ ಸಣ್ಣ ಮಗು ಹೀಗಾದನಲ್ಲ" ಎಂದು ಕೊಳದ ದಡದಲ್ಲಿ ತಾಯಂದರು ಮೆತ್ತಗೆ ಮಾತಾಡಿಕೊಳ್ಳುವರು.

"ಬರಿ ವೇಷ" ಎನ್ನುವಳು ಕಂದಸ್ವಾಮಿ ಅಯ್ಯರಿನ ಹೆಂಡತಿ.

"ವೇಷವೋ ಮತ್ತಾವುದೋ—ಭಗವಂತನಿಗೇ ಗೊತ್ತು" ಎಂದು ಕಂದಸಾಮಿ ಅಯ್ಯರು ಮನಸ್ಸನ್ನು ಸ್ಥಿರಪಡಿಸಿಕೊಳ್ಳಲು ನೋಡುವರು. ಊರಿನಲ್ಲಿ ಬೇರೆ ಮಕ್ಕಳನ್ನು ಕಂಡರೆ ಅವರಿಗೆ ಬೇಸರವೂ ಕೋಪವೂ ಬರುವುದು.

* * *

ಒಂದು ದಿನ ವೆಂಕಟರಾಯನು ಎಂದಿನಂತೆ ಮಲಗಲು ಮಂಟಪಕ್ಕೆ ಹೋದನು. ಗಣೇಶನು ಮಾಯವಾಗಿದ್ದನು. ಮಂಟಪವೂ ಮುರಿದು ಕಲ್ಲು ಕಂಬಗಳಾಗಿ ಕೆಳಗೆ ಬಿದ್ದಿತ್ತು. ಯಾರೋ ಸೆಟ್ಟಿಯೊಬ್ಬರು ದೇವರ ಕೈಂಕರ್ಯ ವನ್ನು ಮಾಡಿ ಪುಣ್ಯ ಸಂಪಾದಿಸಿಕೊಳ್ಳಲು ಆ ಗುಡಿಯನ್ನು ರಿಪೇರಿ ಮಾಡಲು ತೀರ್ಮಾನಿಸಿ ಕೆಲಸ ಕಾರ್ಯಗಳನ್ನು ಆರಂಭಿಸಿರುವರು. ಗಣೇಶ ನನ್ನು ಹಾಗೆಯೇ ಎಲ್ಲಿಯೋ ಎತ್ತುಕೊಂಡು ಹೋಗಿ ಇರಿಸಿದ್ದರು.

ಮುರಿದು ಬಿದ್ದಿದ್ದ ಮಂಟಪದ ಕಲ್ಲುಗಳ ಬಳಿಯಲ್ಲಿ ವೆಂಕಟ ರಾಯನು ರಾತ್ರಿಯಲ್ಲಿ ನಿದ್ದೆಹೋಗದೆ ಮೌನವಾಗಿ ಕುಳಿತಿದ್ದನು. ಅಂದು ತಾಯಿಯು ಬರಲಿಲ್ಲ. ತನ್ನ ಪಿತ್ತವೂ ತಿಳಿಯಾಯಿತು. ಪ್ರಪಂಚವೂ ಹಿಂದಿನಂತೆ ಪ್ರೀತಿರಹಿತವಾಗಿ ನಿಂತಿತು.

* * *

ಒಂದು ದಿನ ತಾಯಿಯ ಗುಡಿಗೆ ಹೋದನು. ಅಂದಿನಂತೆ ಕಿಟಿಕಿಯಲ್ಲಿ ಇಣಿಕಿ ನೋಡಿದನು. ಗೋಡೆಯ ಮೇಲೆ ಶ್ರೀ ಮೇರಿಯಮ್ಮನ ಚಿತ್ರವನ್ನು ಕಂಡನು. ತನ್ನ ತಾಯಿಯಂತೆಯೇ ಇದ್ದಿತು. ಆದರೆ ಚಿತ್ರದಿಂದ ಇಂದು ಯಾರೂ ಇಳಿದು ಬರಲಿಲ್ಲ. ಚಿತ್ರವು ಚಿತ್ರವಾಗಿಯೇ ಉಳಿಯಿತು.

*           *           *

ಹಲವು ದಿನಗಳು ಮುರಿದು ಬಿದ್ದ ಮಂಟಪದ ಬಳಿಯಲ್ಲಿಯೂ, ತಾಯಿಯ ಗುಡಿಯ ಬಳಿಯಲ್ಲಿಯೂ ಯಾವುದೋ ಕಳೆದು ಹೋಗಿದ್ದ ಪದಾರ್ಥವನ್ನು ಹುಡುಕುವವನಂತೆ ಹುಡುಕಾಡುತ್ತ ತಿರುಗಿದನು. ಒಂದು ದಿನ ಪಾದ್ರಿಯ ಬಳಿ ಮತ್ತೆ ಹೋದನು.

"ಸ್ವಾಮಿ, ನಾನು ಕ್ರೈಸ್ತಮತೀಯನಾಗುತ್ತೇನೆ" ಎಂದನು.

ಪಾದ್ರಿಯವರು ಹುಡುಗನನ್ನು ಬಹಳ ಪ್ರೀತಿಯಿಂದ ಕರೆದು ವಿಚಾರಿಸಿದರು.

ಪಾದ್ರಿಯವರೂ ಶಾನುಭೋಗರಾದ ಕಂದಸ್ವಾಮಿ ಅಯ್ಯರವರೂ ಮಾತಾಡಿಕೊಂಡರು :

"ಅಯ್ಯರವರೇ ಶ್ರೀ ಮೇರಿಯಮ್ಮನ ಕೃಪೆಯಿಂದ ನಿಮ್ಮ ಮಗನಿಗೆ ಹುಚ್ಚು ಬಿಟ್ಟಿದೆ. ಅವನು ಜ್ಞಾನ ಸ್ನಾನವನ್ನು ಅಪೇಕ್ಷಿಸುವನು. ದೇವನ ಇಚ್ಛೆಗೆ ನಾವು ಅಡ್ಡ ಬರಲಾಗದು."

"ಅಯ್ಯೋ! ನಾವು ಬ್ರಾಹ್ಮಣರಾಯಿತಲ್ಲ. ಇದು ಸಾಧ್ಯವಿಲ್ಲ."

"ಹೋದರೆ ಹೋಗಲಿ! ಇದಕ್ಕೆ ಬೇರೆ ವಿಮೋಚನೆಯಿಲ್ಲ. ವೇಷವೊ ನಿಜವೊ—ಹುಚ್ಚು ಕಳೆದು ಎಲ್ಲಿಯಾದರೂ ಸುಖವಾಗಿರಲಿ. ಒಪ್ಪಿಕೊಳ್ಳಿ" ಎಂದು ಅಯ್ಯರ ಹೆಂಡತಿ ಹೇಳಿದಳು.

'ರಾಮ! ರಾಮ! ಹಾಗೆ ಹೇಳಬೇಡ' ಎಂದರು ಕಂದಸ್ವಾಮಿ ಅಯ್ಯರವರು.

ಪಾದ್ರಿಯವರು ಅದಕ್ಕೆ ಮೇಲೆ ಒತ್ತಾಯಪಡಿಸಲಿಲ್ಲ. ಬಿಟ್ಟುಬಿಟ್ಟರು.

* * *

ಅನಂತರ, ಒಂದು ದಿನ ಹುಡುಗನು ಊರಲ್ಲಿ ಕಾಣಿಸಲಿಲ್ಲ. ಎಲ್ಲಿಯೋ ಮರೆಯಾದನು. ಮದರಾಸಿನಲ್ಲಿ ಬೇರೆಯೊಬ್ಬ ದೊಡ್ಡ ಪಾದ್ರಿಯ ಬಳಿ ಜ್ಞಾನಸ್ನಾನವನ್ನು ಹೊಂದಿ ವೆಂಕಟರಾಯನು "ರಾಯಪ್ಪ"ನಾದನು. ಪತ್ರಿಕೆಯನ್ನು ಮಾರುವ ಕೆಲಸಕ್ಕೆ ಸೇರಿಕೊಂಡ. ತಾಯಿತಂದೆಗಳಿಗೆ ಈ ಸಂಗತಿ ತಿಳಿಯದು.

ಕ್ರಿಸ್ತ ಮತೀಯನಾದರೂ ರಾಯಪ್ಪನು ವಿನಾಯಕನ ವಿಗ್ರಹವನ್ನು ಎಲ್ಲಿ ಕಂಡರೂ ನಿಂತು ಕೈಮುಗಿದು ಮುಂದೆ ಹೋಗುವನು. ರಾತ್ರಿ ನಿದ್ದೆ ಹೋಗುವುದು ಒಂದು ವಿನಾಯಕನ ಬಳಿಯಲ್ಲಿಯೇ. ಈಗಲೂ ತಾಯಿಯನ್ನು ಇದಿರು ನೋಡುತ್ತಿರುವನಂತೆಯೇ ಕಾಣುತ್ತದೆ. ಪತ್ರಿಕೆಯನ್ನು ಮಾರುವ ಇತರ ಹುಡುಗರೆಲ್ಲರಿಗೂ ಇವನನ್ನು ಕಂಡರೆ ಬಹಳ ವಿಶ್ವಾಸ.

* * *

"ಕಥೆಗೆ ಕಾಲಿಲ್ಲ. ಆದರೆ ಅರ್ಥವಿರಬೇಕಲ್ಲವೇ? ಅರ್ಥವೇನು? ಸ್ವಲ್ಪ ವಿವರಿಸಿದರೆ ಚೆನ್ನಾಗಿರುವುದು" ಎಂದನು ವಿಕಟನು.

"ಒಂದು ಅರ್ಥವೂ ಇಲ್ಲ. ಮನಸ್ಸಿಗೆ ನೆಮ್ಮದಿ. ಅಷ್ಟೆ" ಎಂದು ನಕ್ಕರು ರಾಜಾಜಿ.

"ಏನು ರಾಯಪ್ಪನ ನಗು ನಗುತ್ತೀರಿ. ಒಂದು ವೇಳೆ ಪುನರ್ವಿವಾಹವು ಕೂಡದೆಂಬ ಪ್ರಚಾರವೊ."

ರಾಜಾಜಿ: "ವಿವಾಹವು ಯಾವಾಗಲೂ ಒಳ್ಳೆಯದು."

"ವಿನಾಯಕನ ಪೂಜೆ ಬಹಳ ಒಳ್ಳೆಯದೆಂಬ ಪ್ರಚಾರವೋ?"

ರಾ: "ಯಾವ ಪೂಜೆಯಾದರೂ ಒಳ್ಳೆಯದಲ್ಲವೆ? ಹಾಗೆಯೂ ಇಟ್ಟುಕೊಳ್ಳಬಹುದು."

" ಒಂದು ವೇಳೆ ಮಲತಾಯಂದರಿಗೆ ಎಚ್ಚರಿಕೆಯೋ ? "

ರಾ : ನಿಮ್ಮ ಪತ್ರಿಕೆಯನ್ನು ಮಲತಾಯಂದಿರು ಓದುತ್ತಾರೆಯೆ ? "

" ಹಾಗಾದರೆ ಬಹಳ ಒಳ್ಳೆಯದು."

" ಈ ಕಾಲದಲ್ಲಿ ಸ್ವಂತ ತಾಯಂದರಿಗಿಂತ ಎರಡನೆಯವರೇ ಮಕ್ಕಳನ್ನು ಅಕ್ಕರೆಯಿಂದ ನೋಡಿಕೊಳ್ಳುವರು."

ರಾ : " ಇರಬಹುದು. ಕಾಲವು ಬದಲಾಯಿಸಿದೆ. ಆದರೆ ಮಲತಾಯಿಯ ಧರ್ಮವನ್ನು ಹಲವು ರೀತಿಯಲ್ಲಿ ಕಾಣಬಹುದು. ಎಂದು ಸಣ್ಣ ಮಗುವನ್ನು ಸೊಸೆಯಾಗಿ ಪಡೆದ ಅತ್ತೆಯೂ ಎರಡನೆಯ ತಾಯಿಯೇ ಆಗುವಳು. ಕೆಲಸಮಾಡುವ ಮಗುವನ್ನು ಕೂಲಿಗಾಗಿ ಹೊಂದಿರುವ ಯಜಮಾನಿ ಹೆಂಗಸೂ ಎರಡನೆಯ ತಾಯಿಯಂತೆಯೇ. ನಾಯಿಮರಿಯನ್ನು ಸಾಕುವ ದೊಡ್ಡ ಮನುಷ್ಯರೂ ಇದೇ ಧರ್ಮದಲ್ಲೇ ನಿಂತವರಾಗುವರು. ಬೆಳೆಯುವ ದೇಹವನ್ನೂ ಜೀವವನ್ನೂ ಕೊಂಡ ಯಾನ ವ್ಯಕ್ತಿಯನ್ನೇ ಆಗಲಿ —ಅದನ್ನು ಪಾಲಿಸಿ ಪೋಷಿಸುವ ಹೊರೆಯನ್ನು ಹೊತ್ತ ಗಂಡಾಗಲಿ ಹೆಣ್ಣಾಗಲಿ—ಇದೇ ಮಲತಾಯಿಯ ಧರ್ಮವನ್ನೇ ನಡೆಸುತ್ತಿರುವವರಾಗುವರು. ಹೆತ್ತ ತಾಯಿಯ ಪ್ರೀತಿಯೇ ಸಹಜವಾದುದು. ಬೇರೆಯವರ ಪ್ರೀತಿ ಆದರಗಳಿಗೆ ತಾಯಿಯ ಪ್ರೀತಿಯೇ ಆದರ್ಶಪ್ರಾಯ. ಅವರೆಲ್ಲರೂ ಬಹು ಎಚ್ಚರಿಕೆಯಿಂದಲೂ, ವಿವೇಕದಿಂದಲೂ, ದೈವಭಕ್ತಿಯಿಂದಲೂ ತಾಯಿಯಂತೆ ವರ್ತಿಸಬೇಕು. ಬೆಳೆಯುವ ದೇಹಕ್ಕೆ ತುಪ್ಪವನ್ನು ಉಣಿಸಬೇಕು. ಬೆಳೆಯುವ ಜೀವಕ್ಕೆ ಪ್ರೀತಿಯೇ ತುಪ್ಪದಂತಾಗುವುದು. ಅದನ್ನು ಉಣಿಸದಿದ್ದರೂ ಅಂತರಂಗವು ಒಣಗಿ ಹೋಗುವುದು."

" ತಲೆ ನೋಯುತ್ತೆ. ದಯಮಾಡಿ ಈ ಉಪದೇಶವನ್ನು ನಿಲ್ಲಿಸಿ. ಎಂದಿನಂತೆ ಯಾವುದೋ ಸಂಸ್ಕೃತದಿಂದ ಭಾಷಾಂತರ ಮಾಡಿ ಹೇಳುತ್ತಿರುವಂತೆ ಕಾಣುತ್ತದೆ. ನಮ್ಮ ಪೇಪರ್ ಮಾರುವವರನ್ನು ತಕ್ಕಮಟ್ಟಿಗೆ

ವಿಶ್ವಾಸದಿಂದಲೆ ನಾವು ಆದರಿಸುತ್ತಿರುವೆವು. ಸ್ವಲ್ಪ ಪಟಿಂಗರೇನೋ, ಹೌದು. ಆದರೆ ನಮ್ಮ ಸಹನೆ ತಪ್ಪುವುದಿಲ್ಲ.”

ರಾ: “ಬಹಳ ಸಂತೋಷ. ರಾಯಪ್ಪನನ್ನು ಚೆನ್ನಾಗಿ ನೋಡಿಕೊಳ್ಳಿ. ಅವನು ಕೆಲವು ವೇಳೆಗಳಲ್ಲಿ ಅರ್ಥವಾಗದಂತೆ ವರ್ತಿಸಿದರೂ ಕೋಪಿಸಿಕೊಳ್ಳಬೇಡಿ. ವಿನಾಯಕನ ಗುಡಿಗೆ ಕಳಿಸಿಬಿಡಿ.”

——:o:——